

॥ ಶ್ರೀ ಕೃಷ್ಣಂ ವಂದೇ ಜಗದ್ಗುರುಮ್ ॥

# ಜ್ಯೋತಿರ್ನಿಧಿ ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿಗಳ

## ಅಭಿನಂದನಾ ಗ್ರಂಥ



## प्रश्नानुक्रमः



ಪ್ರಕಾಶಕರು
ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿ ಅಭಿನಂದನಾ ಸಮಿತಿ, ಉಡುಪಿ

ಜ್ಯೋತಿರ್ನಿಧಿ ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿಗಳ

# ಅಭಿನಂದನಾಗ್ರಂಥ

# प्रश्नानुक्रमः

(ಅಷ್ಟಮಂಗಲಪ್ರಶ್ನೋಪಯೋಗಿ ಶ್ಲೋಕಗಳ ಸಂಗ್ರಹ)

ಪ್ರಧಾನ ಸಂಪಾದಕರು

ವಿದ್ವಾನ್ ಡಿ. ಶಿವಪ್ರಸಾದ ತಂತ್ರೀ

ಉಪನ್ಯಾಸಕರು, ಸಂಸ್ಕೃತ ಮಹಾವಿದ್ಯಾಲಯ, ಉಡುಪಿ.

ಪ್ರಕಾಶಕರು

ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿ ಅಭಿನಂದನಾಸಮಿತಿ

ಉಡುಪಿ

PRAŚNĀNUKRAMAḤ : BAILOORU ANANTHAPADMANABHA TANTRI FELICITATION VOLUME.

Edited by Vidwan D. Shivaprasada Tantri, Lecturer, S.M.S.P. Sanskrit College, Udupi. Ph.(0820) 2521441.

Published by the Bailooru Ananthapadmanabha Tantri Felicitation Committee

First Edition : 2005



Pages : 222

Price : **Rs. 150/-**

ಅಭಿನಂದನಾಗ್ರಂಥ ಸಂಪಾದನ ಸಮಿತಿ



*Computer typeset* : 'Navadurga Lasertech', C/o. Dr. K. Padmanabha Kekunnaya, Udupi. [Ph. 2531159; Mob.: 9242120125]

*Printed at* : Honna padma Printers, Udupi.

# ಅಭಿನಂದನಾಸಮಿತಿಯ ಪದಾಧಿಕಾರಿಗಳು

ಗೌರವಾಧ್ಯಕ್ಷರು : ಶ್ರೀ ಶ್ರೀ ವಿಶ್ವಪ್ರಿಯತೀರ್ಥಶ್ರೀಪಾದರು
ಪರ್ಯಾಯ ಶ್ರೀ ಅದಮಾರು ಮಠ, ಉಡುಪಿ

ಶ್ರೀ ಶ್ರೀ ಸುಗುಣೇಂದ್ರತೀರ್ಥಶ್ರೀಪಾದರು
ಶ್ರೀ ಪುತ್ತಿಗೆ ಮಠ, ಉಡುಪಿ

ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು
ಶ್ರೀ ಪಲಿಮಾರು ಮಠ, ಉಡುಪಿ

ಅಧ್ಯಕ್ಷರು : ಶ್ರೀ ಕಬ್ಯಾಡಿ ಜಯರಾಮ ಆಚಾರ್ಯ

ಉಪಾಧ್ಯಕ್ಷರು : ಶ್ರೀ ಕೃಷ್ಣಮೂರ್ತಿ ಸಾಮಗ, ಉಡುಪಿ
ಶ್ರೀ ಎರ್ಮಾಳು ಶಶಿಧರ ಶೆಟ್ಟಿ
ಶ್ರೀ ರಾಮಪ್ರಸಾದ, ಚೆನ್ನೈ
ಶ್ರೀ ವಾಸುದೇವ ರಾವ್, ಬೆಂಗಳೂರು
ಶ್ರೀ ನಾರಾಯಣದಾಸ್, ಚೆನ್ನೈ
ಶ್ರೀ ಮುರಳಿ ರಾವ್, ಚೆನ್ನೈ
ಶ್ರೀ ಕೆ. ಎಲ್. ರಾವ್, ಚೆನ್ನೈ
ಶ್ರೀ ಯಾದವಾಚಾರ್ಯ, ಮುಂಬಯಿ
ಶ್ರೀ ಪೆರ್ಣಂಕಿಲ ಹರಿದಾಸ ಭಟ್, ಮುಂಬಯಿ

ಪ್ರಧಾನ ಸಂಚಾಲಕ : ಶ್ರೀ ವೈ. ಎನ್. ರಾಮಚಂದ್ರ ರಾವ್

ಸಹಸಂಚಾಲಕ : ಶ್ರೀ ಗೋವಿಂದರಾಜ್, ಉಡುಪಿ

ಕೋಶಾಧಿಕಾರಿ : ಶ್ರೀ ಜಯತೀರ್ಥಾಚಾರ್ಯ, ಉಡುಪಿ

ಸಲಹೆಗಾರರು : ಶ್ರೀ ಕಲ್ಯ ಗೋಪಾಲಾಚಾರ್ಯ
ಶ್ರೀ ಡಿ. ವಿ. ಹರಿಕೃಷ್ಣ ತಂತ್ರಿ
ಶ್ರೀ ಕುಕ್ಕಿಕಟ್ಟೆ ಶ್ರೀಪತಿ ತಂತ್ರಿ
ಶ್ರೀ ಕುಕ್ಕಿಕಟ್ಟೆ ಶ್ರೀಧರ ತಂತ್ರಿ
ಶ್ರೀ ಜಾರ್ಕಳ ನಾರಾಯಣ ತಂತ್ರಿ
ಶ್ರೀ ಶಿಬರೂರು ಹಯಗ್ರೀವ ತಂತ್ರಿ
ಶ್ರೀ ಕಬಿಯಾಡಿ ಶ್ರೀನಿವಾಸ ಆಚಾರ್ಯ
ಶ್ರೀ ಮಧೂರು ರಂಗನಾರಾಯಣ ಭಟ್
ಶ್ರೀ ಸಗ್ರಿ ಗೋಪಾಲಕೃಷ್ಣ ಸಾಮಗ
ಶ್ರೀ ಹರಿದಾಸ ಉಪಾಧ್ಯಾಯ

ಸದಸ್ಯರು : ಶ್ರೀ ಕೊರಂಗ್ರಪಾಡಿ ಸರ್ವೋತ್ತಮ ತಂತ್ರಿ
ಶ್ರೀ ಕೊರಂಗ್ರಪಾಡಿ ಪುರುಷೋತ್ತಮ ತಂತ್ರಿ
ಶ್ರೀ ಕೊರಂಗ್ರಪಾಡಿ ರಾಘವೇಂದ್ರ ತಂತ್ರಿ
ಶ್ರೀ ಕಲ್ಲೆಟ್ಟಂಕರ ಪದ್ಮನಾಭ ಶರ್ಮಾ
ಶ್ರೀ ಪಂಜ ಭಾಸ್ಕರ ಭಟ್
ಡಾ। ಎಚ್. ಕೆ. ಸುರೇಶಾಚಾರ್ಯ
ಶ್ರೀ ಕುಂಭಾಶಿ ಶ್ರೀಪತಿ ಉಪಾಧ್ಯಾಯ
ಶ್ರೀ ವಿ. ವಿಶ್ವನಾಥ ಭಟ್, ಶಿಬರೂರು
ಶ್ರೀ ಸತ್ಯಮೂರ್ತಿ ಕಲ್ಲೂರ, ಉಪ್ಪೂರು
ಶ್ರೀ ಗಣೇಶ ಶರ್ಮಾ, ಬರೆಮಾರು
ಶ್ರೀ ಸ್ಕಂದಪ್ರಸಾದ ಭಟ್, ಕಡಂದಲೆ
ಶ್ರೀ ಡಿ. ಶಿವಪ್ರಸಾದ ತಂತ್ರಿ, ಕಡಿಯಾಳಿ
ಶ್ರೀ ಬಿ. ಕೆ. ಸುಬ್ರಹ್ಮಣ್ಯ ತಂತ್ರಿ
ಶ್ರೀ ರಾಮಮೂರ್ತಿ ತಂತ್ರಿ
ಶ್ರೀ ಗಂಗಾಧರ ಶರ್ಮಾ, ಮೂಡಬಿದ್ರಿ
ಶ್ರೀ ಸುಬ್ರಹ್ಮಣ್ಯ ಸರಳಾಯ
ಶ್ರೀ ನರಹರಿ ತಂತ್ರಿ
ಶ್ರೀ ಅನಂತಮೂರ್ತಿ ಆಚಾರ್ಯ
ಶ್ರೀ ಎನ್. ರವಿಕುಮಾರ ಭಟ್
ಶ್ರೀ ಕೆ. ಪಿ. ಕುಮಾರಗುರು ತಂತ್ರಿ

ಹಾಗೂ ಇತರ ವಿದ್ಯಾರ್ಥಿವೃಂದ

## ಕಾರ್ಯಕಾರಿ ಸಮಿತಿ

ಅಧ್ಯಕ್ಷರು : ಶ್ರೀ ಪಾವಂಜೆ ವಾಸುದೇವ ಭಟ್

ಉಪಾಧ್ಯಕ್ಷರು : ಶ್ರೀ ಮಟಪಾಡಿ ನರಸಿಂಹ ಸಾಮಗ
ಡಾ। ರಾಜೇಶ ರಾವ್

ಪ್ರಧಾನ ಕಾರ್ಯದರ್ಶಿ : ಶ್ರೀ ಅನಂತಪದ್ಮನಾಭ ಆಸ್ರಣ್ಣ, ಕಟೀಲು

ಜೊತೆ ಕಾರ್ಯದರ್ಶಿಗಳು : ಶ್ರೀ ಕೃಷ್ಣಪ್ರಸಾದ ರಂಗಭಟ್ಟ
ಶ್ರೀ ಎ. ವಿ. ಕೆ. ಬಲ್ಲಾಳ್
ಶ್ರೀ ಗಂಗಾಧರ ಅಡಿಗ
ಶ್ರೀ ಶ್ರೀಧರ ಅಡಿಗ
ಶ್ರೀ ರಾಜಶೇಖರ ಶಿವತ್ತಾಯ
ಶ್ರೀ ಹರಿನಾರಾಯಣದಾಸ ಆಸ್ರಣ್ಣ,
ಶ್ರೀ ಜೆ. ಎನ್. ಶ್ರೀಪ್ರಸಾದ ತಂತ್ರಿ



ಶ್ರೀ ಶ್ರೀ ವಿಶ್ವಪ್ರಿಯತೀರ್ಥಶ್ರೀಪಾದರು
ಪರ್ಯಾಯ ಶ್ರೀ ಅದಮಾರು ಮಠ
ಶ್ರೀಕೃಷ್ಣಮಠ, ರಥಬೀದಿ, ಉಡುಪಿ.
Ph.: 0820-2525600, 2520598



## ಅನುಗ್ರಹಸಂದೇಶ

ಜ್ಯೋತಿಷಶಾಸ್ತ್ರದ ಫಲ ಕರತಲ ಆಮಲಕದಂತೆ. ಜ್ಯೋತಿಷ್ಕರು ಫಲ ಹೇಳುವುದು ವ್ಯಕ್ತಿಯನ್ನು ನೋಡಿ ಅಲ್ಲ. ಆತನ ಜಾತಕವನ್ನು ನೋಡಿ. ಆದ್ದರಿಂದಲೇ ಕೆಲವರು ತಮ್ಮ ಜಾತಕವನ್ನು ತೋರಿಸಿ ಫಲವನ್ನು ಹೇಳಿಸಿಕೊಳ್ಳುತ್ತಾರೆ. ಆದರೆ ಆ ಫಲವು ಆ ವ್ಯಕ್ತಿಯಲ್ಲಿ ಕಾಣುವುದಿಲ್ಲ. ಕಾರಣ ಆ ಜಾತಕವು ಆತನದ್ದು ಆಗದಿರುವುದು.

ಹುಟ್ಟುವ ಸಮಯವು ಅರ್ಧ ನಿಮಿಷ ಹೆಚ್ಚು ಕಮ್ಮಿಯಾದರೂ ಫಲವು ಜಾತಕ ತಂದವನಿಗೆ ಸೇರದೆ ಆ ಸಮಯದಲ್ಲಿ ಹುಟ್ಟಿದವನಿಗೆ ಸೇರುವುದು.

ಈ ರೀತಿ ಸಮಯ ವ್ಯತ್ಯಾಸವಾಗಿದ್ದರೂ ಜಾತಕ ತಂದವನಿಗೆ ಫಲವು ಸೇರಬೇಕಾದರೆ ಜ್ಯೋತಿಷ್ಕರು ಊಹಾಪೋಹಪಟು, ಸಿದ್ಧಮಂತ್ರರೆಂಬ ಬಿರುದು ಉಳ್ಳವರಾಗಬೇಕು.

ಇಂತಹ ಜ್ಯೋತಿಷ್ಕರು ಬಹಳ ವಿರಳ. ಇರುವ ಕೆಲವರಲ್ಲಿ ಬೈಲೂರು ಪದ್ಮನಾಭ ತಂತ್ರಿಗಳು ಒಬ್ಬರು. ಈ ಶಾಸ್ತ್ರಕ್ಕೆ ಬೇರಿನಂತೆ ಇದ್ದು ತನ್ನ ಶಿಷ್ಯರೆಂಬ ಅನೇಕ ಕೊಂಬೆರೆಂಬೆಗಳಿಂದ ಈ ಶಾಸ್ತ್ರವೃಕ್ಷದ ನೆರಳು ಇಡೀ ಸಮಾಜಕ್ಕೆ ಸಿಗುವಂತೆ ಮಾಡಿದ್ದಾರೆ. ಈ ವೃಕ್ಷದಿಂದ ತಾನು ಅನೇಕ ಫಲಗಳನ್ನು ಪಡೆದರು. ಹಾಗೆಯೇ ಅನೇಕ ಗ್ರಂಥರಚನೆಗಳೆಂಬ ನೀರು ಗೊಬ್ಬರಗಳ ಮೂಲಕ ಈ ವೃಕ್ಷವನ್ನು ಬೆಳೆಸಿದರೂ ಕೂಡ.

ಸಿದ್ಧಮಂತ್ರರಾದ ಇವರು ಒಬ್ಬ ವ್ಯಕ್ತಿಯನ್ನು ಮನಃಪೂರ್ವಕವಾಗಿ ಹರಸಿದರೆ ಆತನ ಉನ್ನತಿಯಲ್ಲಿ ಎರಡು ಮಾತಿಲ್ಲ. ಇಂತಹ ತಂತ್ರಿಯವರಿಂದ ಪುಷ್ಟವಾದ ಶಿಷ್ಯಸಂಪತ್ತು ಅವರ ೮೨ನೆಯ ಜನ್ಮದಿನವನ್ನು ಆಚರಿಸುವುದು ಸಂತೋಷದ ಸಂಗತಿ. ಇದರಿಂದ ಶಿಷ್ಯರಿಗೇ ಶ್ರೇಯಸ್ಸು. ಇದರಿಂದ ಮಹಾಭಾರತದ 'ಆಚಾರ್ಯಂ ಶಿಕ್ಷಿತಾಃ ಶಿಷ್ಯಾಃ ತ್ಯಜಂತಿ' ಎಂಬ ಮಾತಿನಿಂದ ಹೊರಗುಳಿದ ಶಿಷ್ಯವರ್ಗ ಎಂಬ ಬಿರುದು ಈ ಶಿಷ್ಯವರ್ಗಕ್ಕೆ ಸಲ್ಲುತ್ತದೆ. ಇದರಿಂದ ತಂತ್ರಿಯವರ ಶಿಷ್ಯವಾತ್ಸಲ್ಯ ಎಷ್ಟಿದೆ ಎಂಬುದು ತಿಳಿಯುತ್ತದೆ. ಈ ರೀತಿ ತಂತ್ರಿಯವರ ಹಾಗೂ ಶಿಷ್ಯರ ಸಂಬಂಧ ನೂರು ಕಾಲ ಬಾಳಲಿ ಎಂದು ನಮ್ಮ ಆರಾಧ್ಯಮೂರ್ತಿ ಉಡುಪಿ ಶ್ರೀಕೃಷ್ಣಮುಖ್ಯಪ್ರಾಣಮಧ್ವರಲ್ಲಿ ನಮ್ಮ ಪ್ರಾರ್ಥನೆ.

ದೇವರು ಒಳ್ಳೆಯದು ಮಾಡಲಿ.

ಇತಿ ನಾರಾಯಣಸ್ಮರಣೆಗಳು

ಶ್ರೀ ಶ್ರೀ ವಿಶ್ವಪ್ರಿಯತೀರ್ಥರು.



**ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರು**
**ಶ್ರೀಪೇಜಾವರ ಅಧೋಕ್ಷಜ ಮಠ**
**ಜಗದ್ಗುರು ಶ್ರೀಮಧ್ವಾಚಾರ್ಯಮೂಲಮಹಾಸಂಸ್ಥಾನಮ್**
**ಉಡುಪಿ.**



## ಅನುಗ್ರಹಸಂದೇಶ

*ನಮ್ಮ ವಿಶೇಷ ಅಭಿಮಾನಪಾತ್ರರಾದ ಬೈಲೂರು ಅನಂತಪದ್ಮನಾಭ ತಂತ್ರಿಗಳು ಉಡುಪಿಯಲ್ಲಿ ಜ್ಯೋತಿಃಶಾಸ್ತ್ರದ ಬಗೆಗೆ ಸಲ್ಲಿಸಿದ ಸೇವೆಯು ಅಮೋಘವಾಗಿದೆ. ನಿಃಸ್ವಾರ್ಥತೆಯಿಂದ ನೂರಾರು ವಿದ್ಯಾರ್ಥಿಗಳಿಗೆ ಅಖಂಡವಾಗಿ ವಿದ್ಯಾದಾನ ಮಾಡಿ ಉಡುಪಿಯಲ್ಲಿ ಜ್ಯೋತಿಃಶಾಸ್ತ್ರದ ಜ್ಯೋತಿಯನ್ನು ಬೆಳಗಿದವರು. ಇವರ ಸಮ್ಮಾನ ಸಮಾರಂಭವನ್ನು ಅವರ ಶಿಷ್ಯರೂ ಅಭಿಮಾನಿಗಳೂ ಸೇರಿ ನಡೆಸುತ್ತಿರುವುದು ಅತ್ಯಂತ ಸ್ವಾಗತಾರ್ಹ. ಈ ಸಮಾರಂಭವು ಚೆನ್ನಾಗಿ ನಡೆಯಲಿ. ಎಲ್ಲರ ಗೌರವಾದರಪಾತ್ರರಾದ ಬೈಲೂರು ಅನಂತಪದ್ಮನಾಭ ತಂತ್ರಿಗಳು ಬಹುಕಾಲ ನಮ್ಮ ಜೊತೆಗಿದ್ದು ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿರುವಂತೆ ಶ್ರೀಕೃಷ್ಣಮುಖ್ಯಪ್ರಾಣರು ಅನುಗ್ರಹಿಸಲಿ.*

ಇತಿ ಸಪ್ರೇಮ ನಾರಾಯಣಸ್ಮರಣೆಗಳು

**ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರು**



ಶ್ರೀ ಶ್ರೀ ಸುಗುಣೇಂದ್ರತೀರ್ಥಶ್ರೀಪಾದರು
ಜಗದ್ಗುರು ಶ್ರೀಮಧ್ವಾಚಾರ್ಯಮೂಲಮಹಾಸಂಸ್ಥಾನಮ್
ಶ್ರೀ ಪುತ್ತಿಗೆ ಮಠ, ಉಡುಪಿ.



## ಅನುಗ್ರಹಸಂದೇಶ

*ಸಾಂಪ್ರದಾಯಿಕ ಪರಂಪರೆಯ ದೊಡ್ಡ ವಿದ್ವಾಂಸರಾದ ಶ್ರೀಯುತ ಬೈಲೂರು ಅನಂತಪದ್ಮನಾಭ ತಂತ್ರಿಗಳು ಪರಮ ಸಾತ್ವಿಕ ವ್ಯಕ್ತಿತ್ವ ಹೊಂದಿದವರು. ಇವರು ಹಲವು ಜ್ಯೋತಿರ್ವಿದ್ವಾಂಸರನ್ನು ಸಮಾಜಕ್ಕೆ ನೀಡಿದ ಗರಿಮೆಯನ್ನು ಹೊಂದಿದವರು.*

*ಶ್ರೀಯುತ ತಂತ್ರಿಯವರಿಗೆ ದೀರ್ಘಾಯುರಾರೋಗ್ಯವನ್ನು ಕೊಡಲೆಂದು ಶ್ರೀಕೃಷ್ಣಮುಖ್ಯಪ್ರಾಣ ರಲ್ಲಿ ಪ್ರಾರ್ಥಿಸುತ್ತೇವೆ.*

ಇತಿ ಸಪ್ರೇಮ ನಾರಾಯಣಸ್ಮರಣೆಗಳು

ಶ್ರೀ ಶ್ರೀ ಸುಗುಣೇಂದ್ರತೀರ್ಥಶ್ರೀಪಾದರು



**ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು**
**ಜಗದ್ಗುರು ಶ್ರೀಮಧ್ವಾಚಾರ್ಯಮೂಲಮಹಾಸಂಸ್ಥಾನಮ್**
**ಶ್ರೀಪಲಿಮಾರು ಮಠ, ಉಡುಪಿ.**



## ಅನುಗ್ರಹಸಂದೇಶ

*ಸಮ್ಮಾನದಿಂದ, ಪ್ರಶಂಸನೆಯಿಂದ, ಶಾಲುಪೀತಾಂಬರಗಳಿಂದ, ಕಟಕಕೇಯೂರಗಳಿಂದ ದೂರಸರಿದು ಮನೆಯೊಳಗೆ ಸೇರುವ ಸೌಜನ್ಯಸಂಕೋಚಗಳ ಸಾಕಾರಮೂರ್ತಿ ಶ್ರೀ ಅನಂತಪದ್ಮನಾಭ ತಂತ್ರಿಗಳು. ಸಮ್ಮಾನ ಬೇಡವೆಂದ ಮಂದಿಗೆ ಮಾಡುವ ಸಮ್ಮಾನಕ್ಕೆ ನಿಜವಾದ ಸಮ್ಮಾನ ಸಲ್ಲುವುದು. ತಂತ್ರಿಗಳ ಬಗ್ಗೆ ಇದು ಅನ್ವರ್ಥವಾದ ಸುಭಾಷಿತ.*

*ಶ್ರೀ ತಂತ್ರಿಗಳ ಬಂಧುಮಿತ್ರರು, ಆಪ್ತ ಆತ್ಮೀಯರು, ಶಿಷ್ಯಶಿಷ್ಯರು, ಹಿತೈಷಿಗಳು, ಪ್ರತಿಷ್ಠಿತರು, ಅಧಿಕಾರಿಗಳು, ಊರವರು ಪರವೂರವರು ಸೇರಿ ಮಾಡುವ ಈ ಸಮ್ಮಾನ ಅತ್ಯಂತ ಪ್ರಸ್ತುತ. ಶ್ರೀಕೃಷ್ಣಮಧ್ವರ ಭಕ್ತರಾದ ತಂತ್ರಿಗಳಿಗೆ ಈ ಪವಿತ್ರ ತಾಣದಲ್ಲೇ ಸಲ್ಲಿಸುವ ಸಮ್ಮಾನ ಅವರ ಪ್ರಸಾದವೇ ಸರಿ. ಇಂತಹ ಈ ಆದರ್ಶ ಕಾರ್ಯಕ್ರಮ ರಾಜ್ಯ, ಕೇಂದ್ರ ಸರಕಾರಗಳ ಸಮ್ಮಾನ ಸಮಿತಿಗಳ ಪದಾಧಿಕಾರಿಗಳ ಕಣ್ಣು ತೆರೆಸಲಿ. ಶ್ರೀ ತಂತ್ರಿ ದಂಪತಿಗಳಿಗೆ ದೀರ್ಘಾಯುರಾರೋಗ್ಯ ಐಶ್ವರ್ಯಸಂಪತ್ತನ್ನು ಹರಿಗುರುಗಳು ಕರುಣಿಸಲಿ ಎಂದು ಶ್ರೀರಾಮ-ಕೃಷ್ಣ-ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ. ಸಮ್ಮಾನವನ್ನು ಹಮ್ಮಿಕೊಂಡು ಶತಾಯುಗತಾಯ ಪ್ರಯತ್ನ ಸಾಧಿಸಿದ ಸಾಧಕರನ್ನು ತುಂಬುಹೃದಯದಿಂದ ಅಭಿನಂದಿಸುತ್ತೇವೆ.*

ಸಪ್ರೇಮ ನಾರಾಯಣಸ್ಮರಣೆಗಳು

ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು

ಶ್ರೀಗುರುಭ್ಯೋ ನಮಃ



# ಸಮರ್ಪಣೆ

ಜ್ಯೋತಿಶ್ಶಾಸ್ತ್ರದಲ್ಲಿ ತಲಸ್ಪರ್ಶಿ ಪಾಂಡಿತ್ಯ ಪಡೆದು "ಜ್ಯೋತಿರ್ನಿಧಿ" ಎಂಬ ಬಿರುದಿಗೆ ಭಾಜನರಾದ, ನಿಸ್ವಾರ್ಥ ಭಾವನೆಯಿಂದ ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿ ಸಮಾಜಕ್ಕೆ ಜ್ಯೋತಿಶ್ಶಾಸ್ತ್ರ ಪಂಡಿತರನ್ನು ಕೊಡುಗೆಯಾಗಿ ಇತ್ತ, ಜಿಲ್ಲೆಯ ಅನೇಕ ದೇಗುಲಗಳಲ್ಲಿ ಅಷ್ಟಮಂಗಲ ಪ್ರಶ್ನೆಗಳನ್ನು ನಡೆಸಿ ಅಲ್ಲಿನ ಅಭಿವೃದ್ಧಿಗೆ ಮಾರ್ಗದರ್ಶಕರೆನಿಸಿದ, ಗುರುವರೇಣ್ಯರಾದ ಶ್ರೀ ಬೈಲೂರು ಪದ್ಮನಾಭ ತಂತ್ರಿಗಳ ಚರಣಾರವಿಂದಗಳಲ್ಲಿ ಈ ಗ್ರಂಥಕುಸುಮವು ಗೌರವಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.

ಅಧ್ಯಕ್ಷರು ಮತ್ತು ಸರ್ವಸದಸ್ಯರು
ಬೈಲೂರು ಅನಂತಪದ್ಮನಾಭ ತಂತ್ರೀ ಅಭಿನಂದನಾ ಸಮಿತಿ
ಮತ್ತು
ಸಮಸ್ತ ಶಿಷ್ಯವೃಂದ

ಪಾರ್ಥಿವ ಜ್ಯೇಷ್ಠ ಶುದ್ಧ ಸಪ್ತಮಿ ಮಂಗಳವಾರ
ದಿನಾಂಕ : 14-06-2005
ಸ್ಥಳ : ರಾಜಾಂಗಣ ಸಭಾಂಗಣ
ಶ್ರೀಕೃಷ್ಣಮಠ
ಉಡುಪಿ.

# ಪ್ರಕಾಶಕರ ಬಿನ್ನಹ

**ಜ್ಯೋತಿಷಾಭಿಮಾನಿಗಳಲ್ಲಿ ನಮ್ಮ ಪ್ರೀತಿಪೂರ್ವಕ ನಿವೇದನೆ.**

*ಮಾನ್ಯರೇ,*

*ಸಹಸ್ರಾರು ವಿದ್ಯಾರ್ಥಿಗಳಿಗೆ ಹಲವು ದಶಕಗಳ ಕಾಲ ನಿಃಸ್ವಾರ್ಥವಾಗಿ ಜ್ಯೋತಿಶ್ಶಾಸ್ತ್ರಜ್ಞಾನಾಮೃತವನ್ನು ಣಿಸಿದ ಹಿರಿಯ ಜ್ಯೋತಿಷಿಕರಾದ ಶ್ರೀಯುತ ಬೈಲೂರು ಅನಂತಪದ್ಮನಾಭ ತಂತ್ರಿಗಳು ಮೇರುಸದೃಶ ವ್ಯಕ್ತಿತ್ವ ಹೊಂದಿದವರು. 'ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್' ಎಂಬ ಉಪನಿಷತ್ತಿನ ಮಾತನ್ನೇ ಜೀವನದ ಉಸಿರಾಗಿಸಿ ತಮ್ಮ ಮನೆಯನ್ನೇ ಗುರುಕುಲವನ್ನಾಗಿಸಿ ಸದಾ ಕಾಲ ಜ್ಯೋತಿಶ್ಶಾಸ್ತ್ರದ ಚಿಂತನೆ, ಪಾಠಪ್ರವಚನಗಳಿಂದಲೇ ಜೀವನವನ್ನು ಸಾರ್ಥಕಗೊಳಿಸಿಕೊಂಡವರು. ಕೇರಳ ಮತ್ತು ದಕ್ಷಿಣ ಕನ್ನಡ ಪ್ರಾಂತ್ಯದ ಪ್ರಸಿದ್ಧ ದೇವಾಲಯಗಳಲ್ಲಿ ಅಷ್ಟಮಂಗಲಪ್ರಶ್ನೆ ನಡೆಸಿದ ಹೆಮ್ಮೆ ಇವರದ್ದಾಗಿದೆ.*

*ಇವರು ಜ್ಯೋತಿಶ್ಶಾಸ್ತ್ರದ ತಲಸ್ಪರ್ಶಿ ಪಾಂಡಿತ್ಯ ಪಡೆದಿದ್ದರೂ, ಹೇರಳ ಧನಸಂಪಾದಿಸಿ ಕೊಡುವ ವೃತ್ತಿಜೀವನಕ್ಕೆ ತನ್ನನ್ನು ಪೂರ್ಣವಾಗಿ ತೊಡಗಿಸಿಕೊಳ್ಳದೆ, ವಿದ್ಯಾರ್ಥಿಗಳಿಗೆ ಜ್ಯೋತಿಶ್ಶಾಸ್ತ್ರದ ಪಾಠಪ್ರವಚನ ನಡೆಸಲು ಮೊದಲ ಮನ್ನಣೆ ನೀಡಿದವರು. ಸಹಸ್ರಾರು ವಿದ್ಯಾರ್ಥಿಗಳಿಗೆ ಒಂದು ಚಿಕ್ಕಾಸೂ ತೆಗೆದುಕೊಳ್ಳದೆ ಜ್ಯೋತಿಶ್ಶಾಸ್ತ್ರದ ಜ್ಞಾನಾಮೃತವನ್ನು ಅಹೋರಾತ್ರ ಉಣಿಸಿದವರು. ಪಾಠ ಪ್ರಾರಂಭ ಮಾಡಿದರೆಂದರೆ ಇವರಿಗೆ ಗಂಟೆಯ ತಂಟೆಯೇ ಇರಲಿಲ್ಲ. 'ಗುರುಗಳೇ, ರಾತ್ರಿ ಗಂಟೆ ಎಂಟು ಆಯಿತು' ಎಂದು ಹೇಳಿದರೂ ಮತ್ತೊಂದು ಅರ್ಧ ಗಂಟೆ ಪಾಠ ಮಾಡಿಯೇ ಪೂರೈಸುತ್ತಿದ್ದರು. ಕೇಳುವ ಶಿಷ್ಯರ ಉತ್ಸಾಹಕ್ಕಿಂತಲೂ ಹಲವು ಪಟ್ಟು ಮಿಗಿಲು ಉತ್ಸಾಹ ಇವರದ್ದಾಗಿತ್ತು. ಪಾಠ ಪ್ರಾರಂಭವಾದ ಅನಂತರ ದೂರದ ಊರಿನಿಂದ ಪ್ರಶ್ನೆ ಕೇಳಲು, ಜಾತಕ ತೋರಿಸಲು ಬಂದ ಜನರಿಗೂ ಅವಕಾಶ ಕೊಡುತ್ತಿರಲಿಲ್ಲ. ಹತ್ತು ಹಲವು ಪುಸ್ತಕಗಳ ಅವಲೋಕನ, ಒಂದೇ ವಿಷಯದಲ್ಲಿ ಹಲವು ಗ್ರಂಥಗಳ ಅಭಿಪ್ರಾಯಗಳ ಕ್ರೋಡೀಕರಣ, ಪಾಠ ಮಾಡುವ ವಿಷಯಗಳನ್ನು ಮುಂಚಿತವಾಗಿ ಬರೆದು ಟಿಪ್ಪಣಿ ಮಾಡುವುದು ಇವರ ನಿತ್ಯಜೀವನದ ಪ್ರಮುಖ ದಿನಚರಿ. ವಿಷಯಗಳನ್ನು ಮನದಟ್ಟಾಗುವಂತೆ ತಿಳಿಸುವುದು, ಶಿಷ್ಯರಿಗೂ ಬರೆಯಲನುಕೂಲವಾಗುವಂತೆ ಶ್ಲೋಕಗಳನ್ನು ನಿಧಾನವಾಗಿ ಓದಿ ಹೇಳುವುದು –ಇವರ ತಾಳ್ಮೆಯ ಆಳವನ್ನು ಪರಿಚಯಿಸುತ್ತದೆ. ಶಿಷ್ಯರಲ್ಲಿ ಮೇಲುಕೀಳೆಂಬ ಭಾವನೆ ಅವರಲ್ಲಿ ಒಂದು ಕ್ಷಣವೂ ತೋರುತ್ತಿರಲಿಲ್ಲ.*

*ಜಗದ್ಗುರು ಶ್ರೀ ಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ಪಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶ ತೀರ್ಥಶ್ರೀಪಾದರಿಗೆ ಹಾಗೂ ಪುತ್ತಿಗೆ ಮಠದ ಶ್ರೀ ಶ್ರೀ ಸುಗುಣೇಂದ್ರತೀರ್ಥಶ್ರೀಪಾದರಿಗೆ ಜ್ಯೋತಿಃಶಾಸ್ತ್ರಾಧ್ಯಾಪನವನ್ನು ಮಾಡಿದ ಗರಿಮೆಯನ್ನೂ ಇವರು ಹೊಂದಿದ್ದಾರೆ.*

*ಗುರುಗಳಾದ ಶ್ರೀಯುತ ತಂತ್ರಿಗಳು ಪತ್ನೀಪುತ್ರಪೌತ್ರಪ್ರಪೌತ್ರಸಹಿತರಾಗಿ ಎಂಬತ್ತೆರಡು ವಸಂತಗಳ ಸವಿಯನ್ನುಂಡು ಇತ್ತೀಚೆಗಷ್ಟೇ ಸಹಸ್ರಚಂದ್ರದರ್ಶನಶಾಂತಿಯನ್ನು ನಡೆಸಿ ಧನ್ಯತೆಯನ್ನು ಪಡೆದರು. ಇದುವೇ ಸದವಕಾಶವೆಂದು ಮನಗಂಡ ಅವರ ಶಿಷ್ಯವೃಂದ ಶ್ರೀಕೃಷ್ಣಮುಖ್ಯಪ್ರಾಣರ ಸನ್ನಿಧಿಯಲ್ಲಿ ಗುರುಗಳಾದ ಅಷ್ಟಮಠಾಧೀಶರ ಮೂಲಕ ಶ್ರೀಯುತ ತಂತ್ರಿಯವರನ್ನು ಅಭಿನಂದಿಸುವ ಸಂಕಲ್ಪದೊಂದಿಗೆ ಕಾರ್ಯೋನ್ಮುಖವಾಯಿತು. ಈ ಅಭಿನಂದನೆಯ ಸವಿನೆನಪಿಗಾಗಿ ಗ್ರಂಥವೊಂದನ್ನು ಪ್ರಕಾಶಪಡಿಸುವುದೆಂದೂ ತೀರ್ಮಾನಿಸಿತು. ಈ ಗ್ರಂಥದ ಒಂದು ಭಾಗದಲ್ಲಿ ಗುರುಗಳಾದ ಶ್ರೀಯುತ ತಂತ್ರಿಗಳ ಸಾಧನೆಯ ಚಿತ್ರಣವೂ ಇನ್ನೊಂದು*

ಭಾಗದಲ್ಲಿ ಅವರ ಪಾಠದ ಶೈಲಿಯ ಮೇಲೆ ಬೆಳಕು ಚೆಲ್ಲುವ ಅವರದೇ ಪರಿಕಲ್ಪನೆಯ 'ಪ್ರಶ್ನಾನುಕ್ರಮ'ವೆಂಬ ಹೆಸರಿನ ಜ್ಯೌತಿಷಗ್ರಂಥವಿರಬೇಕೆಂದೂ ನಿರ್ಧರಿಸಿ ಒಂದು ಸಂಪಾದಕ ಮಂಡಲಿಯನ್ನು ರಚಿಸಲಾಯಿತು. ಈ ಸಂಪಾದಕ ಮಂಡಲಿಯ ಪರಿಶ್ರಮ ಮತ್ತು ಗುರುಹಿರಿಯರ ಮಾರ್ಗದರ್ಶನದಿಂದಾಗಿ ನಮಗೆ ಈಗ ಈ ಅಭಿನಂದನಗ್ರಂಥವು ಉಪಲಬ್ಧವಿರುವುದು.

ಶಾಸ್ತ್ರಸಂರಕ್ಷಣೆಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿರುವ ಗುರುಗಳು ಪ್ರಚಾರವನ್ನೆಂದೂ ಬಯಸಿದವರಲ್ಲ. ಅಲ್ಲದೆ, ತಮ್ಮ ಬಗ್ಗೆ ಯಾವತ್ತೂ ಹಿರಿಮೆಯ ಮಾತುಗಳನ್ನು ಆಡಿದವರಲ್ಲ. ತಮಗೆ ಅಭಿನಂದನ ಕಾರ್ಯಕ್ರಮವೇ ಬೇಡವೆಂದು ವಿರೋಧಿಸಿದರು. ಆದರೂ ತಮ್ಮ ನಿಮಿತ್ತವಾಗಿ ಶಾಸ್ತ್ರೀಯ ಗೋಷ್ಠಿ, ಶಾಸ್ತ್ರಜ್ಞಾನವೃದ್ಧಿ ಮಾಡುವ ಪುಸ್ತಕಪ್ರಕಟನೆಗಳು ನಡೆಯುತ್ತವೆ ಎಂದು ತಿಳಿಸಿದಾಗ ಒಲ್ಲದ ಮನಸ್ಸಿನಿಂದ ಒಪ್ಪಿಗೆ ನೀಡಿದರು. ಆದ್ದರಿಂದ ಗುರುಗಳಿಗೆ ಗೌರವ ಮತ್ತು ಜಿಜ್ಞಾಸುಗಳಿಗೆ ಶಾಸ್ತ್ರಜ್ಞಾನವೆಂಬ ಎರಡು ಉದ್ದೇಶಗಳನ್ನಿಟ್ಟುಕೊಂಡು ಈ ಅಭಿನಂದನಗ್ರಂಥದಲ್ಲಿ 'ಪ್ರಶ್ನಾನುಕ್ರಮ'ವೆಂಬ ಗುರುಗಳ ಪರಿಕಲ್ಪನೆಯ ಪ್ರಶ್ನವಿಭಾಗದ ಶ್ಲೋಕಗಳ ಸಂಗ್ರಹವನ್ನು ಜೊತೆಗೆ ಪ್ರಕಟಿಸುತ್ತಿದ್ದೇವೆ.

ಈ ಗ್ರಂಥವನ್ನು ಸಂಪಾದಿಸಿದ ಸಂಪಾದಕಮಂಡಲಿಗೂ ಲೇಖಕರಿಗೂ ಕಂಪ್ಯೂಟರ್ ಅಕ್ಷರವಿನ್ಯಾಸಕಾರರಿಗೂ ಮುದ್ರಕರಿಗೂ ಈ ಸದವಸರದಲ್ಲಿ ತುಂಬುಹೃದಯದ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇವೆ.

ಈ ಅಭಿನಂದನ ಕಾರ್ಯಕ್ರಮಕ್ಕೆ ಧನಸಹಾಯ ನೀಡಿದ ಎಲ್ಲರಿಗೂ ನಮ್ಮ ನಮನಗಳು. ಈ ಪುಸ್ತಕವು ಜ್ಯೋತಿಶ್ಶಾಸ್ತ್ರ ಜಿಜ್ಞಾಸುಗಳಿಗೆ ಉಪಯುಕ್ತವಾದರೆ ನಮ್ಮ ಶ್ರಮವು ಸಾರ್ಥಕವಾಗುವುದು. ಗುರುಗಳಾದ ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿಗಳ ಚರಣಾರವಿಂದಗಳಿಗೆ ಗೌರವಪೂರ್ವಕವಾಗಿ ಈ ಪುಸ್ತಕವನ್ನು ಸಮರ್ಪಿಸುತ್ತಿದ್ದೇವೆ.

ಇತಿ

**ಅಧ್ಯಕ್ಷರು ಮತ್ತು ಸದಸ್ಯರು**

ಬೈಲೂರು ಅನಂತಪದ್ಮನಾಭ ತಂತ್ರೀ ಅಭಿನಂದನ ಸಮಿತಿ

# ಪ್ರಸ್ತಾವನೆ

ಮಾನ್ಯರೇ,

ಸಾವಿರಾರು ವಿದ್ಯಾರ್ಥಿಗಳಿಗೆ ನಿಃಸ್ಪೃಹರಾಗಿ ವಿದ್ಯಾದಾನ ಮಾಡಿದ ನಮ್ಮ ಗುರುಗಳಾದ ಜ್ಯೌತಿಷರತ್ನಂ ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿಗಳಿಗೆ ಸಹಸ್ರಚಂದ್ರದರ್ಶನ ಶಾಂತಿಯ ಈ ಸದವಸರದಲ್ಲಿ ಶಿಷ್ಯರೆಲ್ಲರೂ ಸೇರಿ ಅಭಿನಂದನಾ ಸಮಾರಂಭವನ್ನು ಉಡುಪಿ ಶ್ರೀಕೃಷ್ಣಮುಖ್ಯಪ್ರಾಣದೇವರ ಸನ್ನಿಧಿಯಲ್ಲಿ ಸಂಘಟಿಸಿರುವುದು ಅತ್ಯಂತ ಸಮುಚಿತವಾಗಿರುವುದು. ಈ ಪ್ರಸಂಗದಲ್ಲಿ ಅವರ ಬಳಿಯಲ್ಲೇ ಜ್ಯೋತಿಃ ಶಾಸ್ತ್ರಾಧ್ಯಯನ ನಡೆಸಿದ ನಮಗೆ ಅಭಿನಂದನಾಗ್ರಂಥ ಸಂಪಾದನೆಯ ಅವಕಾಶ ದೊರೆತದ್ದು ಪೂರ್ವಜನ್ಮ ಸುಕೃತವೆಂದು ತಿಳಿಯುತ್ತೇವೆ.

ಈ ಅಭಿನಂದನಾಗ್ರಂಥದಲ್ಲಿ ಎರಡು ವಿಭಾಗಗಳಿದ್ದು ಮೊದಲ ವಿಭಾಗದಲ್ಲಿ ಗುರುಗಳಾದ ಶ್ರೀಯುತ ತಂತ್ರಿಗಳ ವ್ಯಕ್ತಿತ್ವ ಮತ್ತು ಸಾಧನೆಯ ಮೇಲೆ ಬೆಳಕು ಚೆಲ್ಲುವ ಹಲವು ಲೇಖನಗಳನ್ನು ಪ್ರಕಟಿಸಲಾಗಿದೆ. ಎರಡನೇ ವಿಭಾಗದಲ್ಲಿ ಗುರುಗಳು ಪ್ರಶ್ನಮಾರ್ಗ ಪಾಠವನ್ನು ಮಾಡುವಾಗ ಅನುಸರಿಸಿದ ಪರಿಕಲ್ಪನೆಯ ತಳಹದಿಯಲ್ಲಿ ಪ್ರಶ್ನಶಾಸ್ತ್ರಸಂಬಂಧಿ ಶ್ಲೋಕಗಳ ಸಂಗ್ರಹರೂಪವಾದ 'ಪ್ರಶ್ನಾನುಕ್ರಮ'ವೆಂಬ ಗ್ರಂಥವನ್ನು ಪ್ರಕಟಿಸಿದ್ದೇವೆ.

ಅಷ್ಟಮಂಗಲಪ್ರಶ್ನೆ ಹೇಳುವಲ್ಲಿ ನುರಿತ ಜ್ಯೌತಿಷಿಕರಾದ ಶ್ರೀಯುತ ಅನಂತಪದ್ಮನಾಭ ತಂತ್ರಿಗಳು ಶಿಷ್ಯರಿಗೆ ಪ್ರಶ್ನಮಾರ್ಗ ಗ್ರಂಥದ ಪಾಠ ಮಾಡುವಾಗ ಅದರ ಶ್ಲೋಕಗಳ ಅರ್ಥದ ನಿಖರತೆಗೆ ಸಹಕಾರಿಯಾದ ಇನ್ನಿತರ ಪ್ರಶ್ನ ಗ್ರಂಥಗಳ ಶ್ಲೋಕಗಳನ್ನು ಸೇರಿಸಿಕೊಂಡು ಟಿಪ್ಪಣಿಯನ್ನು ತಯಾರಿಸಿಯೇ ಪಾಠ ಮಾಡುತ್ತಿದ್ದರು. ಇದರಿಂದ 'ಪ್ರಶ್ನಮಾರ್ಗ' ಗ್ರಂಥದ ಶ್ಲೋಕಗಳು ಸರಿಯಾಗಿ ಮನದಟ್ಟಾಗುತ್ತಿದ್ದವು. ಅವರು ಅಷ್ಟಮಂಗಲಪ್ರಶ್ನೆ ಹೇಳುವಾಗಲೂ ಇದೇ ಕ್ರಮವನ್ನು ಅನುಸರಿಸುತ್ತಿದ್ದರು. ಈ ಸಂಗ್ರಹದಲ್ಲಿ ಪ್ರಶ್ನಮಾರ್ಗದ ಶ್ಲೋಕಗಳೇ ಕೆಲವು ಕಡೆ ಸ್ಥಾನ ಬದಲಾಯಿಸಿ ಬಳಸಲ್ಪಡುತ್ತಿದ್ದವು. ಕೆಲವು ಕಡೆ ಪ್ರಶ್ನಕೌತುಕ, ದೇವಪ್ರಶ್ನೆ, ಫಲದೀಪಿಕಾದಿ ಗ್ರಂಥಗಳ ಶ್ಲೋಕಗಳನ್ನು ಸೇರಿಸುತ್ತಿದ್ದರು. ಪ್ರಶ್ನಮಾರ್ಗದಲ್ಲಿ ಆಯುಷ್ಯ, ರೋಗ ಹಾಗೂ ಮರಣನಿರೂಪಣೆಗಿರುವ ನೂರಾರು ಶ್ಲೋಕಗಳು ಅಧ್ಯಯನಯೋಗ್ಯವಾದರೂ ಫಲನಿರೂಪಣೆಗೆ ಅಷ್ಟೊಂದು ಅನಿವಾರ್ಯವೆನಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಅವರು ಸಂಗ್ರಹಿಸಿದ ಹೊಸ ದೃಷ್ಟಿಕೋನದ ಪ್ರಶ್ನ ನಿರೂಪಣಾಗ್ರಂಥದಲ್ಲಿ ಅಗತ್ಯವೆನಿಸುವ ಪ್ರಶ್ನಮಾರ್ಗದ ಶ್ಲೋಕಗಳೆಲ್ಲಾ ಸೇರಿಕೊಂಡಿದ್ದವು. ಮುಕ್ಕಾಲು ಭಾಗ ಪ್ರಶ್ನಮಾರ್ಗದ ಶ್ಲೋಕಗಳೇ ಇದರಲ್ಲಿವೆ ಎಂದರೂ ತಪ್ಪಲ್ಲ. ಆದರೂ ಕಾಲು ಭಾಗ ಅಲ್ಲಲ್ಲಿ ಸೇರಿಕೊಂಡ ಇತರ ಗ್ರಂಥಗಳ ಶ್ಲೋಕಗಳು ಅಷ್ಟಮಂಗಲಪ್ರಶ್ನೆಗಳ ಫಲನಿರೂಪಣೆಯಲ್ಲಿ ಅನಿವಾರ್ಯವಾಗಿವೆ. ಗುರುಗಳ ಈ ಶ್ಲೋಕಸಂಗ್ರಹವನ್ನಾಧರಿಸಿಯೇ ನಾವು ಈ ಗ್ರಂಥವನ್ನು ರಚಿಸಿದ್ದೇವೆ. ಅಲ್ಲದೆ, ಪ್ರಶ್ನಭಾಗದ ಪ್ರಧಾನ ಗ್ರಂಥವಾದ ಪ್ರಶ್ನಮಾರ್ಗದಲ್ಲಿ 'ದೈವಜ್ಞೇನ ಸಮಾಹಿತೇನ ಸಮಯಃ', 'ಪೃಚ್ಛಾನಿರ್ಗಮಮಾರ್ಗಮಂದಿರಗತಿಃ' ಎಂಬೆರಡು ಶ್ಲೋಕಗಳು ಫಲನಿರೂಪಣೆಯ ಅನುಕ್ರಮವನ್ನು ತಿಳಿಸುತ್ತವೆ. ಈ ಗ್ರಂಥದಲ್ಲಿ ಈ ವಿಷಯಾನುಕ್ರಮವನ್ನು ಆಧಾರವಾಗಿಟ್ಟುಕೊಂಡು ಅಷ್ಟಮಂಗಲಪ್ರಶ್ನೆ ಹೇಳಲು ಅತ್ಯಗತ್ಯವೆನಿಸುವ ಶ್ಲೋಕಗಳನ್ನು ಮಾತ್ರ ಏಕತ್ರ ಸಂಗ್ರಹಿಸುವ ಪ್ರಯತ್ನ ಮಾಡಿದ್ದೇವೆ. ಫಲನಿರೂಪಣೆಗೆ ಅನುಕೂಲವಾಗುವಂತೆ ಹಲವು ಕಡೆ ಕೋಷ್ಟಕಗಳನ್ನು ರಚಿಸಿ ವಿಷಯನಿರೂಪಣೆ ಮಾಡಲಾಗಿದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿ ಈ ಗ್ರಂಥಕ್ಕೆ 'ಪ್ರಶ್ನಾನುಕ್ರಮ'ವೆಂಬ ಹೆಸರನ್ನಿಟ್ಟಿದ್ದೇವೆ.

ಈ ಪ್ರಶ್ನಾನುಕ್ರಮಗ್ರಂಥದಲ್ಲಿ ಮಂಗಲಾಚರಣೆ ಮತ್ತು ಗುರುವಂದನೆಗಳನ್ನು ಬಿಟ್ಟರೆ ಬೇರೆ ಹೊಸ ಶ್ಲೋಕಗಳಾವುದೂ ಇಲ್ಲ. ಎಲ್ಲವೂ ಪೂರ್ವಾಚಾರ್ಯರಿಂದ ರಚಿತವಾದ ಶ್ಲೋಕಗಳಾಗಿವೆ. ಪ್ರಶ್ನಮಾರ್ಗದ ಪೂರ್ವಾರ್ಧ (ಮೊದಲ ೧೬ ಅಧ್ಯಾಯಗಳು) ಮತ್ತು ದೇವಪ್ರಶ್ನೆಯ ವಿಷಯಗಳಿಗೆ ಮಾತ್ರ ಈ ಗ್ರಂಥದಲ್ಲಿ ಅವಕಾಶ ಕಲ್ಪಿಸಲಾಗಿದೆ. ರಾಜ, ಚೋರ, ಭೂಮಿ, ಸಂತಾನ, ವಿವಾಹಾದಿ ಪ್ರಶ್ನೆಗಳ ವಿಚಾರ ಈ ಗ್ರಂಥದಲ್ಲಿ ಇಲ್ಲ. ಹೊರರಾಜ್ಯದ ಜನರಿಗೂ ಓದಲನುಕೂಲವಾಗುವಂತೆ ಇದನ್ನು ದೇವನಾಗರಿಲಿಪಿಯಲ್ಲಿ ಪ್ರಕಟಿಸಿದ್ದೇವೆ. ಈ ಗ್ರಂಥವು ಸಂಸ್ಕೃತಭಾಷಾಜ್ಞಾನ ಹೊಂದಿ ಬೃಹಜ್ಜಾತಕ, ಪ್ರಶ್ನಮಾರ್ಗಾದಿಗ್ರಂಥಗಳನ್ನು ಅಧ್ಯಯನ ಮಾಡಿದ ಜ್ಯೋತಿಷಿಗಳಿಗಷ್ಟೇ ಹೆಚ್ಚು ಉಪಯುಕ್ತವಾಗುವುದಾದರೂ ಪ್ರಶ್ನಭಾಗದ ಜಿಜ್ಞಾಸುಗಳಿಗೆ ತಿಳಿದುಕೊಳ್ಳಲು ಹಲವು ಹೊಸ ವಿಚಾರಗಳೂ ಇದರಲ್ಲಿರುವವು. ಕನ್ನಡ ವ್ಯಾಖ್ಯಾನವಿದ್ದರೆ ಉತ್ತಮವೆಂಬ ತುಂಬಾ ಜನರ ಬಯಕೆಯು ಮುಂದಿನ ದಿನಗಳಲ್ಲಿ ಶ್ರೀಕೃಷ್ಣಮುಖ್ಯಪ್ರಾಣರ ಅನುಗ್ರಹದಿಂದ ಈಡೇರ ಬಹುದೆಂದು ಭಾವಿಸುತ್ತೇವೆ.

ನಮ್ಮಲ್ಲಿ ವಿಶ್ವಾಸವನ್ನಿರಿಸಿ ಗ್ರಂಥಸಂಪಾದನೆಯ ಹೊಣೆಯನ್ನು ನೀಡಿದ ಅಭಿನಂದನಾಸಮಿತಿಗೆ ನಮ್ಮ ಕೃತಜ್ಞತೆಗಳು. ಈ ಗ್ರಂಥಕ್ಕೆ ಯೋಗ್ಯ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿದ ಶ್ರೀಯುತ ವಿದ್ವಾನ್ ಸಾಲಿಗ್ರಾಮ ಶ್ರೀನಿವಾಸ ಅಡಿಗ ಹಾಗೂ ಡಾ। ನಿಟಿಲಾಪುರ ಕೃಷ್ಣಮೂರ್ತಿ ಅವರಿಗೆ ನಮ್ಮ ವಂದನೆಗಳನ್ನು ಅರ್ಪಿಸುತ್ತೇವೆ.

ಈ ಅಭಿನಂದನಾಗ್ರಂಥಕ್ಕೆ ಕ್ಲೃಪ್ತಸಮಯದಲ್ಲಿ ಲೇಖನಗಳನ್ನು ಒದಗಿಸಿ ಸಹಕರಿಸಿದ ಹಿರಿಯರಿಗೆ ನಮ್ಮ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಗ್ರಂಥಸಂಪಾದನೆಗೆ ಸಹಕರಿಸಿದ ವಿದ್ವಾನ್ ವೆಂಕಟೇಶಮೂರ್ತಿ ಹಾಗೂ ವಿದ್ವಾನ್ ಶ್ರೀನಾಥ ಎಚ್.ವಿ. ಇವರಿಗೆ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

ಗ್ರಂಥಸಂಪಾದನೆ ಮತ್ತು ವ್ಯಾಕರಣಪರಿಶುದ್ಧಿಯ ನಿಟ್ಟಿನಲ್ಲಿ ನಮ್ಮೊಡನೆ ಅಹರ್ನಿಶಿ ಶ್ರಮಿಸಿದ ಉಡುಪಿ ಸಂಸ್ಕೃತ ಮಹಾವಿದ್ಯಾಲಯದ ಜ್ಯೋತಿಷವಿಭಾಗದ ವಿದ್ಯಾರ್ಥಿಯಾದ ಶ್ರೀಯುತ ರಾಮಕೃಷ್ಣ ಪೆಜತ್ತಾಯರಿಗೆ ಉತ್ತರೋತ್ತರ ಶ್ರೇಯಸ್ಸನ್ನು ಹಾರೈಸುತ್ತೇವೆ.

ಸಂಸ್ಕೃತಭಾಷೆಯಲ್ಲಿ ಮಂಗಲಶ್ಲೋಕಗಳನ್ನು ರಚಿಸಿದ ವಿದ್ವಾನ್ ಶ್ರೀ ಸುಬ್ರಹ್ಮಣ್ಯ ಅವಧಾನಿ ಇವರಿಗೂ ನಮ್ಮ ವಂದನೆಗಳು.

ತುಂಬ ತಾಳ್ಮೆಯಿಂದ ಕಂಪ್ಯೂಟರ್ ಅಕ್ಷರಸಂಯೋಜನೆ ನಡೆಸಿ ನಗುಮೊಗದೊಂದಿಗೆ ನಮ್ಮೊಡನೆ ಸಹಕರಿಸಿದ 'ನವದುರ್ಗಾ ಲೇಸರ್‌ಟೆಕ್'ನ ಡಾ। ಪದ್ಮನಾಭ ಕೇಕುಣ್ಣಾಯದಂಪತಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಲ್ಪಸಮಯದಲ್ಲಿ ಅಂದವಾಗಿ ಪುಸ್ತಕವನ್ನು ಮುದ್ರಿಸಿಕೊಟ್ಟ ಹೊನ್ನಪದ್ಮ ಪ್ರಿಂಟರ್ಸ್‌ನ ಮಾಲಕರಿಗೂ ಧನ್ಯವಾದಗಳು.

ಗಚ್ಛತಃ ಸ್ಖಲನಂ ಕ್ವಾಪಿ ಭವತ್ಯೇವ ಪ್ರಮಾದತಃ ।
ಹಸಂತಿ ದುರ್ಜನಾಸ್ತತ್ರ ಸಮಾದಧತಿ ಸಜ್ಜನಾಃ ॥

ಎಂಬ ಮಾತಿನಂತೆ ಅನವಧಾನದಿಂದಾಗಲೀ ಅಜ್ಞಾನದಿಂದಾಗಲೀ ಹಲವಾರು ಲೋಪ-ದೋಷಗಳು ಉಂಟಾಗಿರಬಹುದು. ಸಜ್ಜನರಾದ ತಾವು ಯೋಗ್ಯ ಸಲಹೆಗಳನ್ನಿತ್ತು ಪ್ರೋತ್ಸಾಹಿಸಬೇಕಾಗಿ ವಿನಮ್ರರಾಗಿ ವಿನಂತಿಸುತ್ತೇವೆ.

*ಈ ಗ್ರಂಥದ ಅಧ್ಯಯನದಿಂದ ಪ್ರಶ್ನಶಾಸ್ತ್ರಜಿಜ್ಞಾಸುಗಳಾದ ವಿದ್ಯಾರ್ಥಿಗಳಿಗೂ ಅಷ್ಟಮಂಗಲ ಫಲಪ್ರವಚನ ಮಾಡುವ ದೈವಜ್ಞರಿಗೂ ಯತ್ಕಿಂಚಿತ್ ಪ್ರಯೋಜನವಾದಲ್ಲಿ ನಮ್ಮ ಈ ಪರಿಶ್ರಮವು ಸಾರ್ಥಕ ವಾಗುವುದು.*

ಇತಿ ಸಜ್ಜನವಿಧೇಯ
**ವಿದ್ವಾನ್ ಡಿ. ಶಿವಪ್ರಸಾದ ತಂತ್ರಿ**
ಪ್ರಧಾನ ಸಂಪಾದಕರು
ಹಾಗೂ ಸಂಪಾದಕಮಂಡಲಿ

*ದಿನಾಂಕ : 14-06-2005*

## ಮುಖಪುಟ ಚಿತ್ರಣ

**ಕಾಂಚನಂ ದರ್ಪಣಂ ಪುಷ್ಪಮಕ್ಷತಂ ಫಲಸಂಚಯಮ್ ।**
**ತಾಂಬೂಲಂ ವಸನಂ ಗ್ರಂಥಮಷ್ಟಮಂಗಲಮಿಷ್ಯತೇ ॥**

ಬಂಗಾರ, ಕನ್ನಡಿ, ಪುಷ್ಪಗಳು, ಅಕ್ಷತೆ, ಫಲಸಮೂಹ, ವೀಳ್ಯದೆಲೆ, ವಸ್ತ್ರ, ಗ್ರಂಥ ಈ ಎಂಟು ಮಂಗಲಪದಾರ್ಥಗಳೇ 'ಅಷ್ಟಮಂಗಲ'ಗಳೆನಿಸಿವೆ. ಇವುಗಳನ್ನಿಟ್ಟು, ರಾಶಿಚಕ್ರ ಬರೆದು ರಾಶಿಗ್ರಹಗಳನ್ನು ಪೂಜಿಸಿ ಪ್ರಾರ್ಥನಾಪೂರ್ವಕ ಕನ್ಯೆಯಿಂದ ಸ್ವರ್ಣನಿಕ್ಷೇಪ ನಡೆಸಿ, ೧೦೮ ಕವಡೆಗಳನ್ನು ಮೂರು ವಿಭಾಗ ಮಾಡುವುದೇ ಅಷ್ಟಮಂಗಲಪ್ರಶ್ನಕ್ರಿಯೆಯಾಗಿದೆ. ಇದರ ತಯಾರಿಯ ಒಂದು ನೋಟ.

# ಛಾಯಾಭಿನಂದನೆ



ಶ್ರೀಯುತ ಪದ್ಮನಾಭ ತಂತ್ರಿಗಳ ಗುರುಗಳಾದ
ಶ್ರೀಮಾನ್ ಭೀಮಾಚಾರ್ಯರು.
ಇವರು ಕೇರಳ ನಿವಾಸಿಯಾಗಿದ್ದರು.



ಶ್ರೀಯುತ ಪದ್ಮನಾಭ ತಂತ್ರಿಗಳ ಗುರುಗಳೂ,
ಪ್ರೋತ್ಸಾಹಕರೂ ಆಗಿದ್ದ
ಬ್ರಹ್ಮಶ್ರೀ ಕುಕ್ಕಿಕಟ್ಟೆ ಕಾಳು
(ರಾಮಕೃಷ್ಣ) ತಂತ್ರಿಗಳು



ಪಲಿಮಾರು ಮಠಾಧೀಶರಾದ
ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರಿಂದ
ಸಮ್ಮಾನ



ಶಿಬರೂರಿನಲ್ಲಿ ನಡೆದ ಆಗಮ ಸಮ್ಮೇಳನದಲ್ಲಿ ಶ್ರೀ ಶಿಬರೂರು ಹಯಗ್ರೀವ ತಂತ್ರಿಗಳಿಂದ ಗೌರವ.





ಸಾಲಿಗ್ರಾಮ ಶ್ರೀ ಗುರು ನರಸಿಂಹ ಸ್ವಾಮಿ ದೇವಾಲಯದಲ್ಲಿ 1996ನೇ ಇಸವಿಯಲ್ಲಿ ನಡೆದ ಅಷ್ಟಮಂಗಲ ಪ್ರಶ್ನೆಯ ನೋಟ.





ಬಡಗುಪೇಟೆಯ ಶ್ರೀ ವಾಸುಕಿ ಅನಂತಪದ್ಮನಾಭ ಸ್ವಾಮಿ ದೇವಸ್ಥಾನದಲ್ಲಿ ನಡೆದ
ಅಷ್ಟಮಂಗಲ ಪ್ರಶ್ನವಿಧಿಯ ದೃಶ್ಯ






ಮಿತ್ತೂರು ತಿಮ್ಮಣ್ಣ ಭಟ್ಟ ಸಂಪ್ರತಿಷ್ಠಾನದ ವತಿಯಿಂದ 2000ನೇ ಇಸವಿಯಲ್ಲಿ
ಶ್ರೀಯುತ ಅನಂತಪದ್ಮನಾಭ ತಂತ್ರಿಗಳ ಅಧ್ಯಕ್ಷತೆಯಲ್ಲಿ ಪುತ್ತೂರಿನಲ್ಲಿ ನಡೆದ
ಜ್ಯೋತಿಶ್ಶಾಸ್ತ್ರ ವಿಚಾರಗೋಷ್ಠಿಯ ಚಿತ್ರ

ಶ್ರೀ ಕೃಷ್ಣೋ ವಿಜಯತೇ



ಸ್ವಸ್ತಿ ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯತ್ಯಾದ್ಯನೇಕ ಗುಣಸಂಪನ್ನ
ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಶ್ರೀಮದುಡುಪಿ ಶ್ರೀಕೃಷ್ಣ ರಾಮ ವಿಟ್ಠಲ
ದಿವ್ಯ ಪಾದ ಪದ್ಮಾರಾಧಕ ಜಗದ್ಗುರು ಶ್ರೀ ಮಧ್ವಾಚಾರ್ಯ ವೇದಾಂತ ಸಿಂಹಾಸನಾಧೀಶ್ವರ
ಶ್ರೀ ಮದಧೋಕ್ಷಜ ತೀರ್ಥ ಶುಭ ಸಂಪ್ರದಾಯ ಪ್ರವರ್ತಕ

ಶ್ರೀ ವಿಜಯಧ್ವಜ ತೀರ್ಥಾಧಿಷ್ಠಿತ

ಶ್ರೀ ಪೇಜಾವರ ಅಧೋಕ್ಷಜ ಮಠಾಧೀಶರಾದ

ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು

ತಮ್ಮ ಚತುರ್ಥ ಪರ್ಯಾಯದ ಅವಧಿಯಲ್ಲಿ ನಡೆಸಿದ ಶ್ರೀಮನ್ನ್ಯಾಯ
ಸುಧಾಮಂಗಳ ಮಹೋತ್ಸವದ ಶುಭ ಸಂದರ್ಭದಲ್ಲಿ

ಪ್ರಸಿದ್ಧ ಜ್ಯೋತಿಶ್ಶಾಸ್ತ್ರಜ್ಞರೂ ಅಷ್ಟಮಂಗಲ ಪ್ರವೀಣರೂ ಎಂಭತ್ತು ವರ್ಷದ
ಇಳಿವಯಸ್ಸಿನಲ್ಲೂ ಅಧ್ಯಾಪನ ಕಾರ್ಯ ದೀಕ್ಷಾ ಬದ್ಧರೂ ಆದ

ಶ್ರೀಯುತ ಬೈಲೂರು ಪದ್ಮನಾಭ ತಂತ್ರಿ

ಇವರಿಗೆ

## ಜ್ಯೋತಿಶ್ಶಾಸ್ತ್ರ ವಿಭೂಷಣ

ಎಂಬ ಪ್ರಶಸ್ತಿಯನ್ನು ನೀಡಿ ಅವರಿಗೆ

ಶ್ರೀ ಕೃಷ್ಣ ಆಯುರಾರೋಗ್ಯವನ್ನು ಕರುಣಿಸಿ ಅನುಗ್ರಹಿಸಲಿ
ಎಂದು ಪ್ರಾರ್ಥಿಸುತ್ತಾ ಅನುಗ್ರಹಿಸಿದ

# ಅಭಿನಂದನ ಪತ್ರ

ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು
ಪರ್ಯಾಯ ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ

15 ಫೆಬ್ರವರಿ 2000

|| ಶ್ರೀ ದುರ್ಗಾಪರಮೇಶ್ವರೀ ಪ್ರಸೀದತು ||

ಕಟೀಲು ಶ್ರೀ ದುರ್ಗಾಪರಮೇಶ್ವರೀ ದೇವಿಯ ಅರ್ಚಕ, ಸ್ಥಳೀಯ ಪ್ರೌಢಶಾಲೆಯ ಕನ್ನಡ ಪಂಡಿತ, ಜ್ಯೋತಿಷ್ಯ ಶಿರೋಮಣಿ, ಪೌರಾಣಿಕ ನಾಟಕ ನಿರ್ದೇಶನ ಚತುರ, ಉಭಯ ಭಾಷಾ ವಿದ್ವಾಂಸ,

ದಿ| ಕಟೀಲು ಶ್ರೀ ಸದಾನಂದ ಆಸ್ರಣ್ಣ

ಇವರ

ಸಾಹಿತ್ಯ, ಕಲಾಪ್ರೇಮದ ಸ್ಮರಣಾರ್ಥ, ಕಟೀಲು ಮೇಳದ ಬಯಲಾಟ ಸೇವೆಯನ್ನು
ಶ್ರೀ ದೇವಿ ಸನ್ನಿಧಿಯಲ್ಲಿ ಶ್ರೀಮತಿ ರುಕ್ಮಿಣೀ ಸದಾನಂದ ಆಸ್ರಣ್ಣ ಹಾಗೂ ಪುತ್ರರು, ಬಂಧು ವರ್ಗದವರು
ನೆರವೇರಿಸುವ ಶುಭಾವಸರದಲ್ಲಿ

ಜ್ಯೋತಿಷ್ಯ ರತ್ನ ಬಿರುದಾಂಕಿತ

ಪೈಲೂರು ಬ್ರಹ್ಮಶ್ರೀ ಅನಂತಪದ್ಮನಾಭ ತಂತ್ರಿ

ಇವರಿಗೆ ಅಭಿಮಾನ ಪೂರ್ವಕ ಅರ್ಪಿಸಿದ

# ಸದಾನಂದ ಆಸ್ರಣ್ಣ ಪ್ರಶಸ್ತಿ ಪತ್ರ

ಪೂಜ್ಯರೇ,

ಭರತಖಂಡದ ಅಮೂಲ್ಯ ವಿದ್ಯಾ ಸಂಪತ್ತುಗಳಲ್ಲಿ ಜ್ಯೋತಿಷ್ಯ ವಿದ್ಯೆಯೂ ಒಂದಾಗಿದ್ದು, ವಿಜ್ಞಾನಿಗಳನ್ನೂ ಬೆರಗುಗೊಳಿಸಬಲ್ಲ ಅನೇಕ ವಿಷಯಗಳು ಅದರಲ್ಲಿವೆ. ನಮ್ಮ ಪ್ರಾಚೀನ ಸಂಸ್ಕೃತಿಯ ನಯನಗಳಂತಿರುವ ಜ್ಯೋತಿಷ್ಯ ಶಾಸ್ತ್ರವನ್ನು ಗುರುಮುಖದಿಂದಲೂ, ಸ್ವಾಧ್ಯಾಯನದಿಂದಲೂ ಸಂಪಾದಿಸಿ, ಅಷ್ಟಮಂಗಲ ಪ್ರಶ್ನೆ ಹೇಳುವುದರಲ್ಲಿ ಅಗ್ರಗಣ್ಯರೆನಿಸಿ, ಶುಚಿತ್ವಜೀವನ ಕ್ರಮದಿಂದ ಬಹುಜನರ ಪ್ರೀತಿ, ವಿಶ್ವಾಸಗಳಿಗೆ ಪಾತ್ರರಾಗಿರುವ ನಿಮಗೆ ಮೊತ್ತಮೊದಲು ನಮನಗಳನ್ನು ಸಲ್ಲಿಸುತ್ತೇವೆ. ಪಟ್ಟ ಶ್ರೀ ವಿಷ್ಣುಮೂರ್ತಿ ದೇವರ ಪರಂಪರೆಯ ತಂತ್ರಿಗಳ ಕುಟುಂಬದ ಶ್ರೀ ಲಕ್ಷ್ಮೀನಾರಾಯಣ ತಂತ್ರಿ, ಸರಸ್ವತಿಯಮ್ಮ ದಂಪತಿಗಳಿಗೆ ಪುತ್ರನಾಗಿ, ಉಡುಪಿ ಸಂಸ್ಕೃತ ಪಾಠಶಾಲೆಯಲ್ಲಿ ಕೊರಂಗ್ರಪಾಡಿ ನಾರಾಯಣ ತಂತ್ರಿಗಳಿಂದ ಸಂಸ್ಕೃತ ಭಾಷೆಯನ್ನು ಕಲಿತು ಪೆರ್ಲ ಶ್ರೀ ವಿಠಲಾಚಾರ್ಯರಿಂದ ಋಗ್ವೇದ, ಪೌರೋಹಿತ್ಯಾದಿಗಳ ಅಭ್ಯಾಸ ಮಾಡಿ ಜ್ಯೋತಿಷ್ಯ ಪಾಠವನ್ನು ಶ್ರೀ ಎಂ. ಆರ್. ಭಟ್ಟಾಚಾರ್ಯರಲ್ಲಿ ಕಲಿತು ಖ್ಯಾತ ಆಗಮಶಾಸ್ತ್ರಜ್ಞ ಶ್ರೀ ಕಾಳುತಂತ್ರಿಯವರೊಂದಿಗೆ ತರಬೇತಿ ಹೊಂದಿ ಪರಿಪೂರ್ಣರೆನಿಸಿರುವ ನಿಮ್ಮ ವ್ಯಕ್ತಿತ್ವಕ್ಕೆ ಮಣಿವ ಒಂದಲ್ಲ, ಹತ್ತಲ್ಲ, ಸಾವಿರಾರು.

ಗುರುಕುಲದ ಮಾದರಿಯಲ್ಲಿ ನೂರಾರು ಶಿಷ್ಯರಿಗೆ, ಜ್ಯೋತಿಷ್ಯ ವಿದ್ಯೆಯನ್ನು ಆಸಕ್ತಿಯಿಂದ ಹೇಳಿಕೊಟ್ಟ ನಿಮ್ಮನ್ನು ಈ ಯುಗದ ಕುಲಪತಿ ಎಂದರೂ ಅತಿಶಯದ ಮಾತಾಗದು. ನಿಮ್ಮಲ್ಲಿ ಜ್ಯೋತಿಷ್ಯ ಪಾಠ ಕಲಿತವರಲ್ಲಿ, ಉಡುಪಿ ಪುತ್ತಿಗೆ ಮಠದ ಶ್ರೀ ಶ್ರೀ ಸುಗುಣೇಂದ್ರ ತೀರ್ಥ ಶ್ರೀಪಾದರೂ, ಪಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶ ಶ್ರೀಪಾದರೂ ಇರುವುದು, ನಿಮ್ಮ ಕೀರ್ತಿಗೊಂದು ಬಹುಮಾನದ ಗರಿ. ನಮ್ಮ ಜಿಲ್ಲೆಯ ಬಪ್ಪನಾಡು, ಕಡಂದಲೆ, ಕಟೀಲು, ಪುತ್ತಿಗೆ, ಸಾಲಿಗ್ರಾಮ, ಪಡುಬಿದ್ರಿ, ಬ್ರಹ್ಮಸ್ಥಾನ ಮೊದಲಾದ ಪ್ರಸಿದ್ಧ ದೇವಾಲಯಗಳಲ್ಲಿ ಅಷ್ಟಮಂಗಳ ಪ್ರಶ್ನೆ ಹೇಳಿ ಸಮಯೋಚಿತವಾಗಿ ಮಾರ್ಗದರ್ಶನ ಮಾಡಿದ ಉನ್ನತ ವ್ಯಕ್ತಿತ್ವ ನಿಮ್ಮದಾಗಿದೆ. ಇಂತಹ ದೇವತಾ ಕಾರ್ಯಗಳಿಗೆ ಈಗಾಗಲೇ ನಿಮಗೆ ಸಂದ ಗೌರವ, ಸನ್ಮಾನಗಳು ಒಂದೆರಡಲ್ಲ. ಜ್ಯೋತಿಷ್ಯ ಶಾಸ್ತ್ರದ ಸಂಬಂಧವಾದ ಅನೇಕ ಮಹತ್ವ ವಿಷಯಗಳಿಗೆ ನೀವು ಬರೆದಿಟ್ಟ ಟಿಪ್ಪಣಿಗಳು ಮುದ್ರಣವಾದರೆ ಬಹಳ ದೊಡ್ಡ ಗ್ರಂಥವಾದೀತು. ಆ ಕಾಲ ಕೂಡಿ ಬರಲೆಂದು ಹಾರೈಸುತ್ತೇವೆ.

ವಯಸ್ಸು, ಅನುಭವಗಳೆರಡರಲ್ಲೂ ಹಿರಿಯರಲ್ಲಿ ಹಿರಿಯನೆನಿಸಿದ ತಾವು ಯಾವ ಕೆಲಸವನ್ನೂ ಅರ್ಥಾಪೇಕ್ಷೆಯಿಂದ ಮಾಡಿದವರಲ್ಲ. ಆದರ್ಶವನ್ನು ಬಿಟ್ಟವರಲ್ಲ. ಭಗವದನುಗ್ರಹದಿಂದ ಪತ್ನಿ, ಪುತ್ರ, ಪುತ್ರಿಯರೊಂದಿಗೆ ಸಂತಸದ ಜೀವನವನ್ನು ನಡೆಸುತ್ತಿರುವ ನಿಮ್ಮ ಸಕಲ ಇಷ್ಟಾರ್ಥಗಳು ಕೈಗೂಡುವಂತಾಗಲಿ ಎಂದು ಶ್ರೀದೇವಿಯಲ್ಲಿ ಸಂಪ್ರಾರ್ಥಿಸಿ ಈ ಪ್ರಶಸ್ತಿಯನ್ನು ಅರ್ಪಿಸುತ್ತೇವೆ.

ಬಹುಧಾನ್ಯ ಸಂ| ರದ
ವೈಶಾಖ ಬ| ೧೨
(23-5-1998)
ಕಟೀಲು, ಶ್ರೀ ದೇವಿ ಸನ್ನಿಧಿ

ಇಂತು
ಶ್ರೀಮತಿ ರುಕ್ಮಿಣೀ ಸದಾನಂದ ಆಸ್ರಣ್ಣ
ಶ್ರೀ ಅನಂತಪದ್ಮನಾಭ ಆಸ್ರಣ್ಣ, ಸಹೋದರರು
ಹಾಗೂ ಬಂಧು ಬಾಂಧವರು



॥ ಸತ್ಯಂ ಪರಂ ಧೀಮಹಿ ॥

# ಅಖಿಲ ಭಾರತ ಜ್ಯೋತಿಷ ಸಮ್ಮೇಳನ - 2001

ಉಡುಪಿ

ಶ್ರೀಮಾನ್ ಶ್ರೀ ಅನಂತಪದ್ಮನಾಭ ತಂತ್ರಿ, ಪೈಲೂರು ಅವರೇ

*ತಮ್ಮ ಜೀವಮಾನವನ್ನು ಭಾರತೀಯ ಜ್ಯೋತಿಶ್ಶಾಸ್ತ್ರ ಪರಂಪರೆಯ ಸಂವರ್ಧನೆಗಾಗಿ ಮೀಸಲಾಗಿಟ್ಟು, ತಮ್ಮ ಸಾರ್ಥಕ ಸೇವೆ ಮತ್ತು ಅಪೂರ್ವ ಸಾಧನೆಯಿಂದ ಈ ಕ್ಷೇತ್ರವನ್ನು ಸಮೃದ್ಧಗೊಳಿಸಿದ ತಮಗೆ ಸರ್ವ ಸಹೃದಯ ಜ್ಯೋತಿಷಿಗಳ ಮತ್ತು ಜ್ಯೋತಿಷಾಭಿಮಾನಿಗಳ ಪ್ರೀತಿಯ ದ್ಯೋತಕವಾಗಿ ಅಖಿಲಭಾರತ ಜ್ಯೋತಿಷ ಸಮ್ಮೇಳನ 2001ರ ಸುಸಂದರ್ಭದಲ್ಲಿ ಅಭಿನಂದನಾಪೂರ್ವಕವಾಗಿ*

## ಜ್ಯೋತಿಷ ವಿದ್ಯಾನಿಧಿ

*ಎಂಬ ಬಿರುದನ್ನಿತ್ತು ಗೌರವಾದರಗಳೊಂದಿಗೆ ಸಮರ್ಪಿಸಿದ*

# ಸಮ್ಮಾನ ಪತ್ರ

ಶ್ರೀ: ಶ್ರೀ [illegible] ಶ್ರೀಪಾದರು
ಗೌರವ ಅಧ್ಯಕ್ಷರು
ಆತಿಥೇಯ ಸಮಿತಿ

ಎಸ್. ಎನ್. ಕಪೂರ್
ಅಧ್ಯಕ್ಷರು
ಭಾರತೀಯ ಜ್ಯೋತಿರ್ವಿಜ್ಞಾನ ಪರಿಷತ್ (ರಿ.).
ನವದೆಹಲಿ

ಕಾರ್ಯಾಧ್ಯಕ್ಷರು
ಆತಿಥೇಯ ಸಮಿತಿ
ಉಡುಪಿ

ದಿನಾಂಕ : 30-12-2001

ಸ್ಥಳ : ರಾಜಾಂಗಣ, ಶ್ರೀಕೃಷ್ಣಮಠ, ಉಡುಪಿ

॥ ಕೃಷ್ಣಂ ವಂದೇ ಜಗದ್ಗುರುಂ ॥

## ಶಿವಳ್ಳಿ ಬ್ರಾಹ್ಮಣ ಪುರೋಹಿತರ ಸಂಘವು

ಉಡುಪಿ ಶ್ರೀಕೃಷ್ಣ-ಮುಖ್ಯಪ್ರಾಣದೇವರ ದಿವ್ಯಸನ್ನಿಧಿಯಲ್ಲಿ

ಪರ್ಯಾಯ ಶ್ರೀ ಪೇಜಾವರ ಮಠದ

ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರ

ಅಮೃತ ಹಸ್ತದಿಂದ

ಜ್ಯೋತಿಷ್ಯ ರತ್ನ ಬಿರುದಾಂಕಿತ ಬೈಲೂರು ಶ್ರೀ ಅನಂತ ಪದ್ಮನಾಭ ತಂತ್ರಿಯವರಿಗೆ

ಅನುಗ್ರಹಪೂರ್ವಕವಾಗಿ ಸಲ್ಲಿಸಿದ

# ಅಭಿನಂದನ ಪತ್ರ

ಪೂಜ್ಯರೇ,

ಶ್ರೀ ಲಕ್ಷ್ಮೀನಾರಾಯಣ ತಂತ್ರಿ ಮತ್ತು ಶ್ರೀಮತಿ ಸರಸ್ವತಿಯಮ್ಮನವರ ಸುಪುತ್ರರಾದ ತಾವು ಬಾಲ್ಯದಲ್ಲೇ ಜ್ಞಾನಾಕಾಂಕ್ಷಿಗಳಾಗಿದ್ದು ಕೊರಂಗ್ರಪಾಡಿ ಶ್ರೀ ನಾರಾಯಣ ತಂತ್ರಿಗಳಿಂದ ಸಂಸ್ಕೃತಾಧ್ಯಯನವನ್ನು ನಡೆಸಿ ಮುಂದಿನ ಮಹಾಸೌಧ ನಿರ್ಮಾಣಕ್ಕೆ ಬೇಕಾದ ಅಡಿಪಾಯವನ್ನು ಹಾಕಿ ಹಿರಿಯರುಗಳ ಅನುಗ್ರಹಕ್ಕೆ ಪಾತ್ರರಾಗಿರುವಿರಿ. ಬಳಿಕ ಶ್ರೀ ವಿಠಲ ಆಚಾರ್ಯರಿಂದ ಋಗ್ವೇದ ಹಾಗೂ ಪೌರೋಹಿತ್ಯಾಧ್ಯಯನವನ್ನು ನಡೆಸಿ ಆಚಾರ್ಯ ವೃತ್ತಿಯಲ್ಲಿ ಮುಂದುವರೆದು ಜ್ಯೋತಿಷ್ಯ ಶಿರೋಮಣಿಗಳಾದ ಶ್ರೀ ಎಂ. ಭೀಮಾಚಾರ್ಯರಲ್ಲಿ ಜ್ಯೋತಿಶ್ಶಾಸ್ತ್ರದ ಮರ್ಮವನ್ನು ತಿಳಿದು ಅವರು ಉಡುಪಿಯಲ್ಲಿ ಹುಟ್ಟು ಹಾಕಿದ "ಜ್ಯೋತಿರ್ವಿಜ್ಞಾನ ಮಂದಿರ"ದ ಜವಾಬ್ದಾರಿಯನ್ನು ಚಿಕ್ಕ ವಯಸ್ಸಿನಲ್ಲೇ ವಹಿಸಿಕೊಂಡ ಕೀರ್ತಿ ನಿಮ್ಮದು. ಆಗಮ ವೇತ್ತಾರರಾದ ಶ್ರೀ ಕಾಳು ತಂತ್ರಿಯವರ ಶಿಷ್ಯೋತ್ತಮರಾದ ನಿಮ್ಮ ವ್ಯಕ್ತಿತ್ವ ಹೊಸ ಹೊಸ ಮಜಲುಗಳನ್ನು ಕಂಡಿತು.

ಜ್ಞಾನ ಪಿಪಾಸುಗಳಾದ ನೂರಾರು ಶಿಷ್ಯರಿಗೆ ಸ್ವಗೃಹದಲ್ಲಿ ಜ್ಯೋತಿರ್ವಿದ್ಯಾದಾನವನ್ನು ನಿಸ್ಪೃಹತೆಯಿಂದ ಮಾಡಿ ನಿಗೂಢ, ಸನಾತನ ವಿದ್ಯೆಯನ್ನು ಉಳಿಸಿ, ಬೆಳೆಸಿ, ಶಿಷ್ಯರಿಗೆ ದಾರಿದೀಪವಾಗಿದ್ದೀರಿ. ದಕ್ಷಿಣಕನ್ನಡದ ಹೆಚ್ಚಿನ ಯುವ ಜ್ಯೋತಿಷಿಗಳು "ನಾನು ಬೈಲೂರು ಅನಂತ ಪದ್ಮನಾಭ ತಂತ್ರಿಗಳ ಶಿಷ್ಯ" ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಿರುವುದು ನಿಮ್ಮ ಶಿಷ್ಯ ವಾತ್ಸಲ್ಯವನ್ನು ಸಾಬೀತುಪಡಿಸುತ್ತಿವೆ. ಅಷ್ಟಮಠದ ಕೆಲವು ಶ್ರೀಪಾದರು ತಮ್ಮಲ್ಲಿ ಜ್ಯೋತಿರ್ವಿದ್ಯಾಧ್ಯಯನ ಮಾಡಿರುವುದು ತಮ್ಮ ತಲಸ್ಪರ್ಶಿ ಪಾಂಡಿತ್ಯವನ್ನು ಋಜುತ್ವಪಡಿಸಿದೆ. "[illegible]" ಎನ್ನುವಂತೆ ನೀವು ಅನೇಕ ಶಿಷ್ಯರ ವ್ಯಕ್ತಿತ್ವ ರೂಪಿಸುವಲ್ಲಿ ಸಫಲರಾಗಿದ್ದೀರಿ. "ಯಾವಜ್ಜೀವಂ ಅಧೀತೇ ವಿಪ್ರಃ" ಎಂದಂತೆ ಇಳಿವಯಸ್ಸಿನಲ್ಲೂ ನೀವು ನಡೆಸುವ ಅಧ್ಯಯನ, ಅಧ್ಯಾಪನ, ಸಂಗ್ರಹ, ಸಂಶೋಧನೆಗಳು ನಿಮ್ಮನ್ನು ಮೇರುವ್ಯಕ್ತಿಯನ್ನಾಗಿಸಿವೆ.

ನಮ್ಮ ಕರಾವಳಿ ಪ್ರದೇಶದ ಹಲವು ದೇವಸ್ಥಾನ, ಬ್ರಹ್ಮಸ್ಥಾನ, ನಾಗಬನ, ಭೂತಾಲಯಗಳು ತಮ್ಮ ಅಷ್ಟಮಂಗಲ ಪ್ರಶ್ನೆಯ ಮೂಲಕ ಜೀರ್ಣೋದ್ಧಾರ, ಪುನಃಪ್ರತಿಷ್ಠೆಯನ್ನು ಹೊಂದಿ ಭಕ್ತರಿಗೆ ಅಭೀಷ್ಟಪ್ರದ ಸ್ಥಾನಗಳಾಗಿವೆ. ಭಕ್ತ ಜನರು ಪ್ರಾಪಂಚಿಕ ಜಂಜಾಟಗಳಿಂದ ಮುಕ್ತಿಪಡೆದು ಸುಖ ಶಾಂತಿ ಸಮೃದ್ಧಿಯನ್ನು ಹೊಂದಿ ಅವರ ಸ್ಮೃತಿಪಟಲದಲ್ಲಿ ಭವರೋಗ ವೈದ್ಯರಾಗಿದ್ದೀರಿ. ಹೋರಾಶಾಸ್ತ್ರ, ಕೃಷ್ಣೀಯ, ಪ್ರಶ್ನಮಾರ್ಗವೇ ಮೊದಲಾದ ಜ್ಯೋತಿಶ್ಶಾಸ್ತ್ರಗಳನ್ನು ಕಂಠಸ್ಥ ಮಾಡಿಕೊಂಡಿರುವ ನಿಮಗೆ - "ಶೀಘ್ರಂ ಸಭಾಸು ಮಹತೀ ಭವತೀಹ ಶೋಭಾ" ಎನ್ನುವಂತೆ ದೊರೆತ ಬಿರುದು, ಸನ್ಮಾನ, ಪ್ರಶಸ್ತಿ ಪತ್ರಗಳು ಹಲವು. ನಿರಾಡಂಬರ, ನಿಗರ್ವಿ, ನಿಸ್ಪೃಹರಾದ ನೀವು ಹಣ ಪ್ರಶಸ್ತಿಗಳ ಬೆನ್ನು ಹತ್ತಿ ಹೋದವರಲ್ಲ. ಯದೃಚ್ಛಯಾ ಅವೇ ನಿಮ್ಮ ಬೆನ್ನ ಹಿಂದೆ ಬಂದಿವೆ.

ಅನೇಕ ಹೋರಾ ತತ್ತ್ವಜ್ಞಃ ಪಂಚ ಸಿದ್ಧಾಂತ ಕೋವಿದಃ । ಊಹಾಪೋಹಪಟುಃ ಸಿದ್ಧಮಂತ್ರೋ ಜಾನಾತಿ ಜಾತಕಮ್ ॥

ಎನ್ನುವಂತೆ ನೀವು ಜಾತಕ ಪ್ರಶ್ನಾ ವಿಮರ್ಶೆಯನ್ನು ಇದಮಿತ್ಥಂ ಎಂದು ತೀರ್ಮಾನಿಸುವುದರಿಂದ, ನಿಮ್ಮಲ್ಲಿ ಸತ್ಯದಮಾತೆ ಇರುವುದರಿಂದ ಜನಾದರಣೀಯರಾಗಿದ್ದೀರಿ. ಬಲ್ಲವರು ನಿಮ್ಮನ್ನು ಚೆನ್ನಾಗಿ ಬಲ್ಲರು.

ಜ್ಯೋತಿಶ್ಶಾಸ್ತ್ರವಿದಗ್ರ್ಯೋ ಗಣಿತಪಟುಃ ವೃತ್ತವಾಂಶ್ಚ ಸತ್ಯವಚಾಃ । ವಿನಯೀ ವೇದಾಧ್ಯಾಯೀ ಗ್ರಹಯಜನಪಟುಃ ಭವತು ದೈವಜ್ಞಃ ॥

ಎಂದು ಪ್ರಶ್ನ ಶಾಸ್ತ್ರದಲ್ಲಿ ಹೇಳಿದ ದೈವಜ್ಞ ಲಕ್ಷಣಗಳೆಲ್ಲಾ ತಮ್ಮಲ್ಲಿ ಮೂರ್ತಿಮತ್ತಾಗಿರುವುದು ಅತ್ಯಪೂರ್ವ. ಜ್ಞಾನವೃದ್ಧರಾದ, ವಯೋವೃದ್ಧರಾದ ನಿಮ್ಮ ಗುಣಗಣಗಳು ಯುವ ಜ್ಯೋತಿಷಿಗಳಿಗೆ ಆದರ್ಶವಾಗಿವೆ. "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ । ಸ ಯತ್ ಪ್ರಮಾಣಂ ಕುರುತೇ ಲೋಕಃ ತದನುವರ್ತತೇ" ಎನ್ನುವಂತಾಗಿದೆ.

ಸರ್ವಗ್ರಹ ನಿಯಾಮಕನಾದ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ಶ್ರೀ ಸೂರ್ಯನಾರಾಯಣನು ನಿಮ್ಮ ತಾಪತ್ರಯಗಳನ್ನು ನಿವಾರಿಸಿ ಪ್ರಾಪಂಚಿಕ ಆಧ್ಯಾತ್ಮಿಕ ಸುಖಶಾಂತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತಾ "ಧಿಯೋ ಯೋ ನಃ ಪ್ರಚೋದಯಾತ್" ಎನ್ನುತ್ತಾ ಶ್ರೀ ಕೃಷ್ಣ ಮುಖ್ಯಪ್ರಾಣರ ಸನ್ನಿಧಿಯಲ್ಲಿ ವಿನಮ್ರರಾಗಿ ಈ ಪ್ರಶಸ್ತಿಪತ್ರವನ್ನು ಅರ್ಪಿಸುತ್ತಿದ್ದೇವೆ.

ವಿಕ್ರಮ ಸಂವತ್ಸರದ
ಭಾದ್ರಪದ ಬಹುಳ ಏಕಾದಶಿ
ತಾ: 24-9-2000

ಶಿವಳ್ಳಿ ಬ್ರಾಹ್ಮಣ ಪುರೋಹಿತರ ಸಂಘ,
ಶ್ರೀ ಪೇಜಾವರ ಮಠ, ಉಡುಪಿ

[illegible] ಪ್ರಿಂಟರ್ಸ್, ಉಡುಪಿ

## ವಿಷಯಾನುಕ್ರಮಣಿಕೆ

# ಶ್ರೀಮುಖದಿಂದ.........

● ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು
ಶ್ರೀಪಲಿಮಾರು ಮಠ, ಉಡುಪಿ.

ಜ್ಯೌತಿಷವು ಸಕಲರನ್ನೂ ತನ್ನೆಡೆಗೆ ಸೆಳೆದ ಒಂದು ಸುಂದರ ವಿದ್ಯೆ. ಸಹಜಸಿದ್ಧವಾದ ಕುತೂಹಲವನ್ನು ತಣಿಸುವ ಸೋಜಿಗದ ಕಲೆ. ಕತ್ತಿಯ ಅಲಗಿನಂತೆ ಮೊನಚಾದ ಜೀವನದ ದಾರುಣ ವಿಷಮಪರಿಸ್ಥಿತಿಯಲ್ಲಿ ದಡ ಪಾರುಮಾಡುವ ಏಕೈಕ ಆಸರೆ ಈ ಜ್ಯೋತಿಷ ಮಾಧ್ಯಮ. ಸಮಸ್ಯೆಯ ಸುಳಿಯಲ್ಲಿ ಸಿಲುಕಿ ಮುಳುಗುವವನನ್ನು ಮೇಲೆತ್ತಿ ಪಾರುಗಾಣಿಸುವ ಏಕೈಕ ಜೀವನನೌಕೆ ಈ ಭವಿಷ್ಯವಾಣಿ.

ಆದರೆ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಈ ಶಾಸ್ತ್ರ ಚರ್ಚೆಗೆ ಗ್ರಾಸವಾದದ್ದು ನಮ್ಮ ದುರಂತವೇ ಸರಿ. ಇದಕ್ಕೆ ಕಾರಣ ಇಲ್ಲವೆಂದಲ್ಲ. ಈ ವಿದ್ಯೆಗೆ ಬ್ರಾಹ್ಮಣರ ಸಂಬಂಧವನ್ನು ಕಲ್ಪಿಸಿ ಪ್ರಪಾತಕ್ಕೆ ತಳ್ಳುವ ಪ್ರಯತ್ನ ವ್ಯವಸ್ಥಿತವಾಗಿ ನಡೆಯುತ್ತಿದೆ. ಬ್ರಾಹ್ಮಣರಿಗೆಲ್ಲ ಉಪಜೀವನ ಈ ವಿದ್ಯೆ ಎನ್ನುವ ಭ್ರಮೆಯೇ ಇದಕ್ಕೆ ಮೂಲಕಾರಣ. ಬ್ರಾಹ್ಮಣರಿಗಿಂತ ಅಬ್ರಾಹ್ಮಣರೇ, ಹಿಂದುಗಳಿಗಿಂತ ಅಹಿಂದುಗಳೇ ಇದರ ಪ್ರಯೋಜನ ಪಡೆಯುತ್ತಾರೆ ಎನ್ನುವ ಸತ್ಯದ ಅರಿವು ಮೂಡದಿರುವುದು ಬಹು ಸೋಜಿಗದ ಸಂಗತಿ. ಭಾರೀ ಆಶ್ಚರ್ಯ ಅಂದರೆ ಯವನರಿಗೆ ಜ್ಯೋತಿಷಶಾಸ್ತ್ರ ಕೊಟ್ಟ ಸ್ಥಾನಮಾನ ಅತ್ಯಂತ ಅನಿರ್ವಚನೀಯ. ಬೃಹಜ್ಜಾತಕದಂತಹ ಅದ್ಭುತ ಕೃತಿಯನ್ನು ಅಧ್ಯಯನ ಮಾಡಿದವರಿಗೆ ಇದೇನೂ ಅರ್ಥವಾಗದ ಸಂಗತಿಯಲ್ಲ.

ಈ ವಿದ್ಯೆ ಸರ್ವಜನಪರವಾದದ್ದು. ಇದರ ಪ್ರಯೋಜನ ಪಡೆಯದಿದ್ದವರು ಇಲ್ಲವೆಂದರೂ ತಪ್ಪಾಗಲಾರದು ಎನ್ನುವಷ್ಟರ ಮಟ್ಟಿಗೆ ಕಟು ಸತ್ಯಸಂಗತಿ ಇದು. ವಿದ್ಯಾರ್ಥಿಗಳಿಂದ ಪ್ರಾರಂಭಿಸಿ ರಾಜಕೀಯ ನಾಯಕರ ತನಕ ಯಾರನ್ನೂ ಬಿಡದೆ ತನ್ನ ಬುಟ್ಟಿಗೆ ಹಾಕಿಕೊಂಡ ಮಹಮಲ್ಲ ವಿದ್ಯೆ ಇದು. ರಾಜಕೀಯ ನಾಯಕರಂತೂ ವೈಯಕ್ತಿಕವಾಗಿ ಒಬ್ಬೊಬ್ಬ ಜ್ಯೋತಿಷ್ಕನ ಕೈಯಲ್ಲಿ ಜುಟ್ಟು ಕೊಟ್ಟು ಕುಣಿಯತಕ್ಕಂತಹದ್ದು ಇನ್ನೂ ಗುಟ್ಟಾಗಿ ಉಳಿದಿಲ್ಲ. ಚುನಾವಣೆ ಸಮೀಪಿಸಿದಂತೆ ರಾಜಕೀಯ ಗೆಲುವು ಉಳಿವಿಗಾಗಿ, ಅಧಿಕಾರ ಗದ್ದುಗೆಗಾಗಿ ಜ್ಯೋತಿಷ್ಕರ ಮನೆಯಲ್ಲೇ ಅಹರ್ನಿಶಿ ಬಿದ್ದು ಒದ್ದಾಡುವುದು ನೂರಕ್ಕೆ ನೂರರಷ್ಟು ಸತ್ಯ.

ಇದೇ ಜ್ಯೋತಿಷ್ಯಕ್ಕೆ ಬಿದ್ದ ಬಲು ದೊಡ್ಡ ಪೆಟ್ಟು. ಹತ್ತಾರು ಪಕ್ಷಗಳ ಜಯ-ಪರಾಜಯ ಚಿಂತನೆಗಾಗಿ ಅಷ್ಟೇ ಸಂಖ್ಯೆಯ ಜ್ಯೋತಿಷ್ಕರೆಂಬ ಹಣೆಪಟ್ಟಿ ಕಟ್ಟಿಕೊಂಡ ಅರೆಬರೆ ಪಂಡಿತರು ಹೊಟ್ಟೆ ಪಾಡಿಗಾಗಿ ಈ ಪವಿತ್ರವಿದ್ಯೆಯನ್ನು ಮಾರುಕಟ್ಟೆಗೆ ತಂದು ಮಾರಾಟದ ಸರಕಾಗಿ ಮಾಡಿದ್ದೇ ಈ ಶಾಸ್ತ್ರಕ್ಕೆ ಹೊಡೆದ ಪರಶುಪ್ರಹಾರ. ಸ್ಪರ್ಧೆಯ ರಣರಂಗಕ್ಕೆ ಇಳಿದ ರಾಜಕೀಯ ಪಕ್ಷದ ಮಧ್ಯೆ ಯಾವುದಾದರೂ ಒಂದು ಪಕ್ಷಕ್ಕೆ ಜಯ ಕಟ್ಟಿಟ್ಟ ಬುತ್ತಿ. ಹಾಗಾಗಿ ಯಾವುದೋ ಒಬ್ಬ ಭವಿಷ್ಯವಾದಿಗೆ ಭವಿಷ್ಯ ಸದ್ಯಕ್ಕಂತೂ ಸತ್ಯ. ಆದರೆ ಇದೆಲ್ಲ ಒಂದಲ್ಲ ಒಂದು ರೀತಿಯಿಂದ ಕಾಕತಾಳೀಯವೇ ಸರಿ. ಕಾಕ ಬರುವುದಕ್ಕೋ ತಾಳೆಹಣ್ಣು ಮರದಿಂದ ಕೆಳಗೆ ಉದುರುವುದಕ್ಕೋ ಅದೇನು ಸಂಬಂಧವೋ ಅದೇ ಸಂಬಂಧ ಅರೆಬರೆ ಜ್ಯೋತಿಷ್ಕನ ಭವಿಷ್ಯವಾದಕ್ಕೂ ಪಕ್ಷದ ವಿಜಯಕ್ಕೂ. ಸ್ಪರ್ಧೆಯ ಕಣಕ್ಕಿಳಿದ ಸ್ಪರ್ಧಾಳುಗಳ ವಿಜಯೋತ್ಸವಕ್ಕಿಂತ ಜ್ಯೋತಿಷ್ಕಂಮನ್ಯರ ವಿಜಯೋತ್ಸವವೇ ಸಮಾಜಕ್ಕೆ ಅಪಾಯಕಾರಿ.

ಇಂತಹ ಜ್ಯೋತಿಷ್ಕಂಮನ್ಯರಿಂದ ಈ ಶಾಸ್ತ್ರಕ್ಕೆ ನಡೆದ ಅಪಚಾರ ಶಾಸ್ತ್ರದ ಕಗ್ಗೊಲೆಯೇ ಸರಿ. ಶಾಸ್ತ್ರವನ್ನು ಮಣ್ಣುಪಾಲು ಮಾಡುವ ಮಹಾ ಆತಂಕದ ಕರಾಳ ಕಾರ್ಮೋಡ ಬಾನಂಗಳದ ಉದ್ದಗಲಕ್ಕೆ ದಟ್ಟವಾಗಿ ಹರಡಿ ನಿಂತಿದೆ. ಸಜ್ಜನರ ಮಾನಸ ಆಗಸದಲ್ಲಿ ಚಿಂತೆಯ ಕತ್ತಲು ಆವರಿಸಿದೆ. ಶಾಸ್ತ್ರದ ಜ್ಞಾನಸೂರ್ಯನ ಪ್ರಸ್ತುತತೆ ಅತ್ಯಗತ್ಯ. ಇಂತಹ ಪ್ರಕ್ಷುಬ್ಧ ವಾತಾವರಣದಲ್ಲಿ ನಿರಾಸೆ ಆವರಿಸಿದರೆ ಆಶ್ಚರ್ಯವೇನಲ್ಲ. ಹಾಗಂತ ಏನೂ ಇಲ್ಲ

ಎಂದು ಕೈಚೆಲ್ಲಿ ಕೂಡಬೇಕಾಗಿಲ್ಲ. ನೀಲಮೇಘದ ಮಧ್ಯದಲ್ಲೂ ಅಲ್ಲೋ ಇಲ್ಲೋ ಎಲ್ಲೋ ಒಂದು ಮೂಲೆಯಲ್ಲಿ ಸೂರ್ಯ-ಚಂದ್ರರು ಇಣುಕಿ ನೋಡುವುದುಂಟು. ಅವರ ಕಿರಣ ಭೂಮಿಯಲ್ಲಿ ಬೆಳಕು ಚೆಲ್ಲುವುದುಂಟು. ಕತ್ತಲೆ ಪರಿಹಾರ ಆಗುವುದೂ ಉಂಟು.

ಇದಕ್ಕೊಂದು ಸುಂದರ ನಿದರ್ಶನ ನಮ್ಮ ಬೈಲೂರು ಶ್ರೀ ಅನಂತಪದ್ಮನಾಭ ತಂತ್ರಿಗಳು. ಇವರ ಹೆಸರನ್ನು ಕೇಳಿದವರುಂಟು, ಕೇಳದವರೂ ಉಂಟು. ಕೇಳಿದವರಿಗಿಂತ ಕೇಳದವರೇ ಜಾಸ್ತಿ ಎಂದರೂ ಆಶ್ಚರ್ಯವೇನೂ ಅಲ್ಲ. ಇಂತಹ ವಿಜ್ಞಾನಭಾಸ್ಕರನನ್ನು ಕಾಣುವ ಕಣ್ಣಿಲ್ಲದಂತಹ ಕುರುಡು ಗೂಬೆಗಳ ಸಂಖ್ಯೆಗೆ ಇತಿಮಿತಿಯೇನೂ ಇಲ್ಲ. ತನ್ನ ವಿದ್ಯೆಯ ಗಂಟನ್ನು ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಇಟ್ಟವರಲ್ಲ. ಜ್ಞಾನದ ಕಟ್ಟನ್ನು ತಲೆಯಲ್ಲಿಟ್ಟು ಬೀದಿಬೀದಿ ಸುತ್ತಿ ಭಿಕ್ಷೆಯೆತ್ತಿ ಕಾಸು ಮಾಡಹೊರಟವರಲ್ಲ. ಜನಜಂಗುಳಿಯ ಯಾತ್ರೆ-ಜಾತ್ರೆಯಲ್ಲಿ ನೂಕುನುಗ್ಗಲಲ್ಲಿ ನುಣುಚಿ ಕಿರುಚಿ ವಿದ್ಯಾಮಾತೆಯ ಮಾನ ಹರಾಜು ಮಾಡಹೊರಟ ಕೂಟದವರಲ್ಲ. ಹಾಗೆಂದು ಮನೆಗೆ ಬಂದ ಮಂದಿಗೆ ಕಾಸು ಕೊಡದೆ ವಾಪಾಸು ಕಳುಹಿಸಿದವರಲ್ಲ. ಜ್ಞಾನದ ಸಂಪತ್ತನ್ನು ತನ್ನ ತಿಜೋರಿಯಲ್ಲೇ ತುಂಬಿಸಿ ಬಚ್ಚಿಟ್ಟು ಬಂದ ಭಿಕ್ಷುಕನ ಜೋಳಿಗೆಯನ್ನು ತುಂಬಿಸದೆ ಬರಿಗೈಯಲ್ಲಿ ಹಿಂತಿರುಗಿಸಿದವರಲ್ಲ. ವಿದ್ಯೆಯ ಸುಮಧುರ ಸುಗಂಧ ವಾರಿಯನ್ನು ಸತ್ಪಾತ್ರರಲ್ಲಿ ಹರಿಯಬಿಡದೆ ರೋಗರುಜಿನಗಳಿಗೆ ನಿಮಿತ್ತವಾದ ದುರ್ಗಂಧ, ರುಚಿಹೀನ, ನಿಂತ ನೀರಾಗಿಸಿದವರಲ್ಲ. ಮತಿ ಬಯಸಿ ಮನೆಗೆ ಬಂದ ಮಂದಿಗೆಲ್ಲ ಮನತುಂಬಿ ಕಳುಹಿಸದ ದಿನ ಒಂದೂ ಇವರದಲ್ಲ.

ಪ್ರಶ್ನೆ ಕೇಳಿ ಉತ್ತರ ಪಡೆದು ತಟ್ಟೆ ತುಂಬ ನೋಟಿನ ಅಟ್ಟಿಯಿಟ್ಟು ಮನೆ ತುಂಬುವ ಧನಿಕನನ್ನೂ ಕಾಯಿಸಿದ್ದುಂಟು; ಉಪೇಕ್ಷೆ ಮಾಡಿದ್ದುಂಟು. ಆದರೆ ವಿದ್ಯೆಯನ್ನು ಅರಸಿ ಬಂದ ವಿದ್ಯಾರ್ಥಿಯನ್ನು ಮಾತ್ರ ಎಂದೂ ಉಪೇಕ್ಷಿಸಿದ್ದಿಲ್ಲ. ವಿದ್ಯೆಯನ್ನು ಬಯಸುವ ವಿದ್ಯಾರ್ಥಿ ಒಬ್ಬ ಇರಬಹುದು. ಆತನ ಜೋಳಿಗೆ ತುಂಬಿ ಹೊರಚೆಲ್ಲಿದರೂ ಸರಿ, ಮತ್ತೂ ಮತ್ತೂ ತುಂಬುವ ಹೆಬ್ಬಯಕೆಯ ಕೊಡುಗೈ ದಾನಿ ಇವರು. ನನ್ನದೊಂದು ಅನುಭವವನ್ನು ಸಹೃದಯರೊಂದಿಗೆ ಹಂಚಿಕೊಳ್ಳಲೇ ಬೇಕು.

ಸುಮಾರು ಹದಿನಾರು ವತ್ಸರಗಳ ಹಿಂದಿನ ಅನುಭವ. ಪಲಿಮಾರು ಮಠದ ಪರ್ಯಾಯದ ಅವಧಿ. ನನಗೊಬ್ಬನಿಗೆ ಜ್ಯೋತಿಷದ ಪಾಠಕ್ಕಾಗಿ ನಿತ್ಯ ಬಡಗುಮಾಳಿಗೆಗೆ ಬರುತ್ತಿದ್ದರು. ತನ್ನ ಹತ್ತಾರು ಕಾರ್ಯಗಳನ್ನು ಬದಿಗೊತ್ತಿ, ನಿತ್ಯವೂ ಹೊತ್ತಿಗೆ ಸರಿಯಾಗಿ ನಮ್ಮಲ್ಲಿಗೆ ಬರುತ್ತಿದ್ದರು. ಅವರು ಹೇಳುವ ಪಾಠ ಕೇಳುವುದೆಂದರೆ ಕಿವಿಗೆ ಅಪೂರ್ವವಾದ ಹಬ್ಬ. ವ್ಯಾಖ್ಯಾನದ ಅಪೂರ್ವ ವಿವರಣೆಯೊಂದಿಗೆ ತನ್ನ ಅನುಭವವನ್ನು ಜೋಡಿಸಿ ಮನದಟ್ಟು ಮಾಡುವ ಅಪೂರ್ವ ಪಾಠದ ಕಲೆ ಇವರದ್ದು. ಹೇಳಬೇಕಾದ್ದನ್ನೆಲ್ಲ ನಿಸ್ಸಂಕೋಚವಾಗಿ ತಿಳಿಸಿ ಹೇಳುವ ಅಪರೂಪದ ಸಹೃದಯ ವಿದ್ವಾಂಸರು. ತಾನು ಸಂಗ್ರಹಿಸಿದ ಸಂಗ್ರಾಹ್ಯ ಅಂಶಗಳನ್ನು ಬರೆಸಿ ದಾಖಲು ಮಾಡಿಸುವ ಭಾರೀ ಜಾಗರೂಕತೆಯ ಅಪೂರ್ವ ವ್ಯಕ್ತಿತ್ವ ಇವರದ್ದು. ಸುಮಾರು ಒಂಬತ್ತು ಗಂಟೆಗೆ ಪ್ರಾರಂಭವಾಗುವ ಪಾಠ ಹನ್ನೆರಡು ಬಡಿದರೂ ನಿಲ್ಲುವಂತಿಲ್ಲ. ಹೊರಗಿನ ಕಲ್ಲ ಹೆಬ್ಬಾಗಿಲಲ್ಲಿ ಗಂಟೆಗೆ ಹನ್ನೆರಡು ಬಾರಿ ಬಡಿದ ಪೆಟ್ಟು ನಮ್ಮ ಎದೆಯನ್ನು ದಡದಡ ಎಂದು ತಟ್ಟಲಾರಂಭಿಸುತ್ತಿತ್ತು. ಆತನ ಗಂಟೆ ಪೆಟ್ಟು ನಿಂತರೂ ನಮ್ಮ ಹೃದಯದ ಪೆಟ್ಟು ನಿಲ್ಲುತ್ತಲೇ ಇರಲಿಲ್ಲ. ಅದೇ ಹೊತ್ತಿಗೆ ನಮ್ಮ ಗುರುಗಳು ಕೃಷ್ಣನ ಮಹಾಪೂಜೆಯನ್ನು ಮುಗಿಸಿ ವೃಂದಾವನಪೂಜೆಯನ್ನೂ ಮುಗಿಸಿ ಸಿಂಹಾಸನಪ್ರವೇಶಿಸುವ ಸುದ್ದಿ ಮುಟ್ಟಿಸುವ 'ತೀರ್ಥಪ್ರಸಾದಕ್ಕಾಗಿ ಬನ್ನಿ' ಎಂದು ಆಹ್ವಾನಿಸುವ ಮಠದ ಭಾಗವತರ ಕಂಚಿನ ತಾಳದ ಪೆಟ್ಟು ಮತ್ತೊಂದು ಕಡೆಯಿಂದ. ಇಷ್ಟಾದರೂ ಶ್ರೀ ತಂತ್ರಿಗಳ ಏಕಾಗ್ರತೆ ಮಾತ್ರ ಪಾಠದ ಶಬ್ದದಲ್ಲೇ. ಒಂದು ಕಡೆಯಲ್ಲಿ ಸರ್ವಜ್ಞಪೀಠದಲ್ಲಿ ತೀರ್ಥಕ್ಕಾಗಿ ಗುರುಗಳು ನನಗೋಸ್ಕರ ಕಾಯುತ್ತಿದ್ದಾರೆ, ಅಲ್ಲಿದ್ದ ವಿದ್ವಾಂಸರು ಶಪಿಸುತ್ತಿದ್ದಾರೆ ಎನ್ನುವ ತರಾತುರಿ. ಇನ್ನೊಂದೆಡೆಯಲ್ಲಿ ತಂತ್ರಿಗಳು ಮಾತ್ರ ಪಾಠವನ್ನು ಸರಾಗವಾಗಿ ಮುಂದುವರಿಸುತ್ತಲೇ ಇದ್ದಾರೆ. ನಿಲ್ಲಿಸುವ ಹಂತದಲ್ಲೇ ಇಲ್ಲ. ಹೇಗೆ ಹೇಳಲಿ ಎನ್ನುವ ದುಗುಡ. ಬೇರೆ ಮಾರ್ಗವಿಲ್ಲದೆ ತಂತ್ರಿಗಳಲ್ಲಿ ಹೇಳಲೇಬೇಕಾದ ಅನಿವಾರ್ಯವಾದ ವಾತಾವರಣ. ಕೊನೆಗೆ ಹೇಳಿಯೇ ಬಿಟ್ಟೆ- "ಪಾಠ ಸಾಕು ಊಟಕ್ಕಾಗಿ ಹೋಗಬೇಕು" ಎಂಬುದಾಗಿ. ಆಗ ಪೆಚ್ಚು ಮುಖ ಹಾಕಿ ಭಾರೀ

ಕಷ್ಟಪಟ್ಟು ಹೇಗೋ ಹೇಗೋ ಮಾಡಿ ಪುಸ್ತಕ ಮುಚ್ಚುತ್ತಿದ್ದರು. "ನಿಲ್ಲಿಸಿ, ಮುಂದೆ ಸಾಗಿರಿ" ಎನ್ನುವ ಫಲಕವನ್ನು ಕಾಣುವ ನೂರಿಪ್ಪತ್ತು ಕಿಲೋ ಮೀಟರ್ ವೇಗದಲ್ಲಿ ನಿರಾತಂಕವಾಗಿ ಓಡುತ್ತಿದ್ದ ಗಾಡಿಯನ್ನು ಸ್ಮೃತಿಪಟಲಕ್ಕೆ ತರುವ ಘಟನೆ ಇದು. ಇದು ಒಂದು ದಿನದ ಕತೆಯಲ್ಲ. ನನಗೆ ಎರಡು ವರ್ಷದ ದೊಡ್ಡ ದಾರುಣ ಅನುಭವವಿದು. ಇದು ನನ್ನ ಒಬ್ಬನದ್ದೇ ಅನುಭವವಲ್ಲ. ಅವರ ಮನೆಗೆ ಹೋಗಿ ಪಾಠ ಕೇಳಿದ ವಿದ್ಯಾರ್ಥಿಗಳೆಲ್ಲರ ಅನುಭವ. ಇಂತಹ ಪ್ರವಚನದ ಆಸಕ್ತಿ ಹೊಂದಿದ ಮಂದಿ ಸುದುರ್ಲಭವೇ ಸರಿ. ಒಂದು ಚಿಕ್ಕಾಸಿನ ಆಸೆಯಿಲ್ಲದೆ ವಿದ್ಯೆಯನ್ನು ಧಾರಾಕಾರವಾಗಿ ಹರಿಸುವ ಮಹಾದಾನ ಇವರದ್ದು.

"ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ" "ವಿದ್ಯಾ ದದಾತಿ ವಿನಯಮ್" ಎನ್ನುವ ನಾಣ್ಣುಡಿಗೆ ಅಚ್ಚೊತ್ತಿ ಮಾಡಿಟ್ಟ ಸುಂದರ ಉದಾಹರಣೆ ಈ ಜೋಯಿಸರು. ಪಾಠದ ಮಧ್ಯದಲ್ಲಿ ಅನುಭವಗಳನ್ನು ಹಂಚಿಕೊಳ್ಳುವು ದುಂಟು. ಮಹಾಮಹಾ ಜ್ಯೋತಿಷ್ಕರನ್ನು ನೆನಪಿಸಿಕೊಳ್ಳುವುದುಂಟು. ದಂಡತೀರ್ಥದ ತಂಬು ಜೋಯಿಸರು, ಕೇರಳದ ಭೀಮಾಚಾರ್ಯರು, ಪಡುಬಿದ್ರೆಯ ಜನಾರ್ದನ ಶರ್ಮರು......... –ಹೀಗೆ ಜ್ಯೋತಿಷ್ಕರ ಹೆಸರು ಹೇಳಿ, ಅಪೂರ್ವ ಘಟನೆಗಳನ್ನು ಬಣ್ಣಿಸಿದ್ದುಂಟು. ಆದರೆ ಎಂದೆಂದೂ ತಾನು ಹಾಗೆ ತಾನು ಹೀಗೆ ಎಂದು ತನ್ನನ್ನು ಮೆರೆಸಿಕೊಂಡ ಘಟನೆ ನನ್ನ ಸ್ಮೃತಿಯಾಳದಲ್ಲಿ ಎಷ್ಟು ಪ್ರಯತ್ನಿಸದರೂ ಹೊರಗೆ ಬರುವುದಿಲ್ಲ. ತುಂಬಿದ ಕೊಡ ತುಳುಕುವುದಿಲ್ಲ ಎನ್ನುವ ಗಾದೆ ತಂತ್ರಿಗಳನ್ನು ನೋಡಿ ಮಾಡಿಸಿದಂತಿದೆ.

ತಂತ್ರಿಗಳ ವಿದ್ಯೆ ಅತ್ಯಪೂರ್ವ. ಬಂಗಾರದ ರಥ ದೇವರಿಗೆ ಅರ್ಪಿಸಬೇಕಾದ ಒಂದು ಸುಂದರ ಸಂದರ್ಭ. ಮಳೆರಾಯ ಆರ್ಭಟಿಸುವ, ತಾಂಡವ ನೃತ್ಯವಾಡುವ ದಾರುಣ ವಾತಾವರಣ. ನಮ್ಮ ಗುರುಗಳು ತಂತ್ರಿಗಳಲ್ಲಿ ಬಂದು ಮುಹೂರ್ತವನ್ನು ಕೇಳಿದರು. ತಂತ್ರಿಗಳು ಹುಡುಕಿ ಹುಡುಕಿ ಸಮಯ ಸೂಚಿಸಿದರು. ಇಡೀ ರಥಬೀದಿಗೆ ಚಪ್ಪರ ಹಾಕಿಸಿದ ಅಬ್ಬರದ ಹಬ್ಬ ಅದು. ಉಡುಪಿಯ ಜನತೆಗೆ ಇಂದೂ ನೆನಪಿದೆ. ಕೃಷ್ಣದೇವರು ಬೀದಿಗೆ ಬಂದರು. ತುಂಬಿ ತುಳುಕುವ ಭಕ್ತವೃಂದದ ಮುಗಿಲು ಮುಟ್ಟುವ ಜಯಕಾರದೊಂದಿಗೆ ಶ್ರೀಕೃಷ್ಣ ಹೊನ್ನ ತೇರನೇರಿದ. ಹತ್ತು ಹನಿ ತುಂತುರುಮಳೆ ಪುಷ್ಪವೃಷ್ಟಿಯೊಂದಿಗೆ ಪರ್ಜನ್ಯದ ಆರ್ಭಟ, ಕಾಲಮೇಘದ ತಾಂಡವ ಸದ್ದುಗದ್ದಲವಿಲ್ಲದೆ ತೆರೆಮರೆ ಸೇರಿದ್ದು ಸಾಮಾನ್ಯದ ಸಂಗತಿಯಲ್ಲ. ಇತಿಹಾಸದಲ್ಲಿ ದಾಖಲಾಗಬೇಕಾದ ಅತಿದೊಡ್ಡ ಪವಾಡ. ಇದರ ಹಿನ್ನೆಲೆಯಲ್ಲಿ ತಂತ್ರಿಗಳ ಪಾತ್ರ ಮರೆಯುವಂತಿಲ್ಲ. ಅವರ ವಿದ್ಯೆಯನ್ನು ಉಪೇಕ್ಷಿಸುವಂತಿಲ್ಲ. ನಮ್ಮ ಗುರುಗಳು ತಂತ್ರಿಗಳ ಈ ವಿದ್ಯೆಯನ್ನು ಕೊನೆತನಕ ಬಾಯಿತುಂಬ ಹೊಗಳುತ್ತಿದ್ದರು. ಬಂದವರಲ್ಲೆಲ್ಲಾ ಹೇಳಿ ತೃಪ್ತಿಪಡುತ್ತಿದ್ದರು.

ಪ್ರಶ್ನೆ ಹೇಳಿ, ಕಾಸು ಮಾಡಿ, ಬೇಂಕಿನಲ್ಲಿ ಕೂಡಿಟ್ಟವರಲ್ಲ. ಯಾರನ್ನೂ ಕಾಡಿದವರಲ್ಲ, ಯಾರನ್ನೂ ಬೇಡಿದವ ರಲ್ಲ. ಕರೆದಲ್ಲಿ ಹೋಗಿ ಪ್ರಶ್ನೆಗಳನ್ನು ಹೇಳಿ, ಜನಜಂಗುಳಿಯಲ್ಲಿ ಮೆರೆಯುವುದಕ್ಕಿಂತ ಮನೆಯಲ್ಲಿದ್ದು ಬಂದ ವಿದ್ಯಾರ್ಥಿಗಳಿಗೆ ಅಹರ್ನಿಶಿ ಪ್ರಾತಃಪ್ರಭೃತಿ ರಾತ್ರ್ಯಂತ ಪ್ರವಚನ ಮಾಡಿ ವಿದ್ಯಾರ್ಥಿವೃಂದವನ್ನೇ ಸಮಾಜಕ್ಕೆ ಧಾರೆಯೆರೆದ ಆದರ್ಶ ಗೃಹಸ್ಥ ಶ್ರೀ ತಂತ್ರಿಗಳು. ಪ್ರಶ್ನೆ ಹೇಳಿ ಪರಿಹಾರ ಹೇಳಿ ಸಮಸ್ಯೆಯನ್ನು ಪರಿಹಾರ ಮಾಡಿದ ಪಟ್ಟಿ ಇತಿಹಾಸ ಮರೆಯಲಾಗದಿದ್ದಷ್ಟು ಉದ್ದ.

ಸಮ್ಮಾನದಿಂದ, ಪ್ರಶಂಸನೆಯಿಂದ, ಶಾಲುಪೀತಾಂಬರಗಳಿಂದ, ಕಟಕಕೇಯೂರಗಳಿಂದ ದೂರಸರಿದು ಮನೆಯೊಳಗೆ ಸೇರುವ ಸೌಜನ್ಯಸಂಕೋಚಗಳ ಸಾಕಾರಮೂರ್ತಿ ಶ್ರೀ ಅನಂತಪದ್ಮನಾಭ ತಂತ್ರಿಗಳು. ಸಮ್ಮಾನ ಬೇಡವೆಂದ ಮಂದಿಗೆ ಮಾಡುವ ಸಮ್ಮಾನಕ್ಕೆ ನಿಜವಾದ ಸಮ್ಮಾನ ಸಲ್ಲುವುದು. ತಂತ್ರಿಗಳ ಬಗ್ಗೆ ಇದು ಅನ್ವರ್ಥವಾದ ಸುಭಾಷಿತ.

ಶ್ರೀ ತಂತ್ರಿದಂಪತಿಗಳಿಗೆ ದೀರ್ಘಾಯುರಾರೋಗ್ಯ ಐಶ್ವರ್ಯಸಂಪತ್ತನ್ನು ಹರಿಗುರುಗಳು ಕರುಣಿಸಲಿ ಎಂದು ಶ್ರೀರಾಮ-ಕೃಷ್ಣ-ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ. ●

# ಗುರುಮುಖದಿಂದ.....

(ಮಿತ್ತೂರು ಸಂಪ್ರತಿಷ್ಠಾನದ ಆಶ್ರಯದಲ್ಲಿ ದಿನಾಂಕ 12-6-2000ದಂದು ಪೋಳ್ಯ ಶ್ರೀಲಕ್ಷ್ಮೀವೆಂಕಟರಮಣ ಮಠದಲ್ಲಿ ನಡೆದ ಜ್ಯೋತಿಶ್ಶಾಸ್ತ್ರ ವಿಚಾರಗೋಷ್ಠಿಯ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದ ಬೈಲೂರು ಶ್ರೀ ಅನಂತಪದ್ಮನಾಭ ತಂತ್ರಿ ಅವರು ಮಾಡಿದ ಭಾಷಣ. 'ಜ್ಯೋತಿಷಸಂವಾದ' ಪುಸ್ತಕದಿಂದ ಉದ್ಧೃತ.)

ಸತ್ಯಜ್ಞಾನಪರಬ್ರಹ್ಮಜ್ಯೋತಿರಾನಂದರೂಪಿಣೀಮ್ ।
ನೌಮಿ ಸರ್ವೋತ್ತರೋದಾತ್ತಪ್ರಶ್ನಮಾಲಾಂ ಸರಸ್ವತೀಮ್ ॥
ವಾಚಂ ನಃ ಸ ದದಾತ್ವನೇಕಕಿರಣಸ್ತ್ರೈಲೋಕ್ಯದೀಪೋ ರವಿಃ ॥

ಪ್ರತಿಯೊಂದು ಶಾಸ್ತ್ರದಲ್ಲೂ ಆಳವಾದ ವಿಚಾರವಿಮರ್ಶೆಗಳು ನಡೆಯಬೇಕಾದ್ದು ಇಂದಿನ ಆವಶ್ಯಕತೆಯಾಗಿದೆ. ಶಾಸ್ತ್ರದ ವಿಚಾರಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದಾಗ ಮಾತ್ರ ನಿಜವಿಚಾರಗಳು ಸ್ಪಷ್ಟವಾಗಲು ಸಾಧ್ಯ. 'ವಾದೇ ವಾದೇ ಜಾಯತೇ ತತ್ತ್ವಬೋಧಃ' 'ಸತತಂ ಮಂಥಯಿತವ್ಯಂ ಮನಸಾ ಮಂಥಾನಭೂತೇನ' ಇತ್ಯಾದಿ ಮಾತುಗಳು ವಿಮರ್ಶೆಗಿರುವ ಪ್ರಾಧಾನ್ಯವನ್ನು ಒತ್ತಿಹೇಳುತ್ತವೆ. ಇಂದು ಐವರು ಘನವಿದ್ವಾಂಸರು ಜ್ಯೋತಿಶ್ಶಾಸ್ತ್ರದ ಐದು ಮುಖ್ಯ ವಿಷಯಗಳ ಮೇಲೆ ತಮ್ಮ ಅಪೂರ್ವವಾದ ವಾಕ್‌ಸರಣಿಯ ಮೂಲಕ ಉನ್ನತ ವಿಚಾರಗಳನ್ನು ಪ್ರಸ್ತುತಪಡಿಸಿದ್ದಾರೆ. ಈ ವಿಚಾರಗೋಷ್ಠಿಯಲ್ಲಿ ನನ್ನನ್ನು ಅಧ್ಯಕ್ಷಸ್ಥಾನದಲ್ಲಿ ಕುಳ್ಳಿರಿಸಿ ನೀವೆಲ್ಲಾ ನಿಮ್ಮ ಉತ್ತಮವಾದ ಸೌಜನ್ಯವನ್ನು ಪ್ರಕಟಿಸಿದ್ದೀರಿ. ಈ ಸ್ಥಾನದ ಕರ್ತವ್ಯತಾದೃಷ್ಟಿಯಿಂದ ನನ್ನೆರಡು ಮಾತುಗಳನ್ನು, ಅಭಿಪ್ರಾಯಗಳನ್ನು ನಿಮ್ಮೆಲ್ಲರೊಂದಿಗೆ ಹಂಚಿಕೊಳ್ಳಲು ಬಯಸುತ್ತೇನೆ.

'ಜ್ಯೋತೀಂಷಿ ಗ್ರಹನಕ್ಷತ್ರಾಣಿ; ತಾನಿ ಅಧಿಕೃತ್ಯ ಪ್ರವೃತ್ತಮಿದಂ ಶಾಸ್ತ್ರಂ ಜ್ಯೋತಿಶ್ಶಾಸ್ತ್ರಮ್'

ಆಗಸದಲ್ಲಿ ಕಂಗೊಳಿಸುವ ಗ್ರಹನಕ್ಷತ್ರಗಳ ಕುರಿತಾಗಿ ವಿಮರ್ಶಿಸುವ ಶಾಸ್ತ್ರವೇ ಈ ಜ್ಯೋತಿಶ್ಶಾಸ್ತ್ರ, ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ ಕಲ್ಪಗಳೊಂದಿಗೆ ಜ್ಯೋತಿಶ್ಶಾಸ್ತ್ರವೂ ವೇದಾಂಗ ಎನಿಸಿದೆ.

'ಜ್ಯೋತಿಶ್ಶಾಸ್ತ್ರಂ ವದತ್ಯತ್ರ ಕಾಲಂ ವೈದಿಕಕರ್ಮಣಾಮ್'

ವೇದೋಕ್ತವಾದ ಯಜ್ಞಯಾಗಾದಿಗಳಿಗೆ ಸರಿಯಾದ ಕಾಲವನ್ನು ನಿರ್ಣಯಿಸಿ ಹೇಳುವುದು ಈ ಶಾಸ್ತ್ರಾರಂಭಕ್ಕೆ ಮುಖ್ಯ ಉದ್ದೇಶವಾಗಿದೆ. ಆದರೆ ಕ್ರಮೇಣ ಮನುಷ್ಯನ ನಿತ್ಯ ಜೀವನದ ಮೇಲೂ ಗ್ರಹನಕ್ಷತ್ರಗಳ ಪ್ರಭಾವವನ್ನು ವಿಮರ್ಶಿಸುತ್ತಾ ಇದು ತ್ರಿಸ್ಕಂಧಾತ್ಮಕವಾದ ಒಂದು ಬೃಹತ್ ವೃಕ್ಷವಾಗಿ ಬೆಳೆದುನಿಂತಿದೆ. ಗಣಿತ, ಸಂಹಿತಾ, ಹೋರಾ ಎಂದು ಇದರಲ್ಲಿ ಒಟ್ಟು ಮೂರು ವಿಭಾಗ ಮಾಡಬಹುದಾದರೂ ಜಾತಕ, ಗೋಲ, ನಿಮಿತ್ತ, ಪ್ರಶ್ನೆ, ಮುಹೂರ್ತ, ಗಣಿತ ಎಂಬ ಆರು ಪ್ರಧಾನ ವಿಷಯಗಳು ನಮ್ಮ ದೃಗ್ಗೋಚರವಾಗುವುವು. ಇವನ್ನೇ ಜ್ಯೋತಿಶ್ಶಾಸ್ತ್ರದ ಷಡಂಗಗಳೆಂದು ಹೆಸರಿಸಲಾಗಿದೆ. ಈ ಶಾಸ್ತ್ರದ ಪ್ರತಿಯೊಂದು ವಿಷಯದ ಮೇಲೂ ಪ್ರಾಚೀನ ಋಷಿಗಳ ಹಾಗೆಯೇ ಋಷಿಸಮಾನರಾದ ಜ್ಯೋತಿರ್ವಿದರ ನೂರಾರು ಗ್ರಂಥರತ್ನಗಳಿವೆ. ಈ ಶಾಸ್ತ್ರದ ಆಮೂಲಾಗ್ರ ಅಧ್ಯಯನ ಬಹಳ ಕಷ್ಟಸಾಧ್ಯವಾದ ಮಾತು. ಆದರೆ ಪ್ರತಿಯೊಂದು ಅಂಗದಲ್ಲೂ ಪ್ರಧಾನವಾದ ಬೃಹಜ್ಜಾತಕ, ಫಲದೀಪಿಕಾ, ಪ್ರಶ್ನಮಾರ್ಗ, ಮುಹೂರ್ತಪದವೀ, ಸಿದ್ಧಾಂತ ಶಿರೋಮಣಿ, ಬೃಹತ್ಸಂಹಿತಾದಂತಹ ಗ್ರಂಥಗಳ ಅಧ್ಯಯನವನ್ನು ಸರಿಯಾಗಿ ಮಾಡಿ ಶಾಸ್ತ್ರದ ತಳಸ್ಪರ್ಶಿ ಪಾಂಡಿತ್ಯ ಪಡೆಯಬೇಕಾದುದು ಅತ್ಯವಶ್ಯ. ಇದಲ್ಲದೆ ಧರ್ಮಶಾಸ್ತ್ರ, ಆಧುನಿಕ ಗಣಿತಪದ್ಧತಿಗಳನ್ನು ಸ್ವಲ್ಪಮಟ್ಟಿಗೆ ಮೆಯ್ಗೂಡಿಸಿಕೊಳ್ಳದಿದ್ದರೂ ಈ ಶಾಸ್ತ್ರದ ಅಧ್ಯಯನ ಪೂರ್ಣವಾಗದು. ಇತ್ತೀಚೆಗೆ 'ಕಂಪ್ಯೂಟರ್'ನ ಪ್ರಭಾವವೂ ಜ್ಯೋತಿಶ್ಶಾಸ್ತ್ರದ ಮೇಲೆ ಬಹಳವಾಗಿ ಆಗುತ್ತಿರುವುದನ್ನು ಕಾಣಬಹುದು. ಜ್ಯೋತಿಶ್ಶಾಸ್ತ್ರ ಉಳಿದ ಶಾಸ್ತ್ರಗಳಂತೆ ನಿಂತ ನೀರಾಗಿರದೆ ಇಂದಿಗೂ ಹರಿಯುವ ಜೀವನದಿಯಾಗಿದೆ. ಹೊಸ ಹೊಸ ವಿಚಾರಧಾರೆಗಳನ್ನು ತನ್ನ ಪ್ರವಾಹಕ್ಕೆ ಸೇರಿಸಿಕೊಂಡು ಮುಂದಡಿ ಇಡುತ್ತಿದೆ.

ಹೀಗಿರುವಾಗ ಜ್ಯೋತಿಶ್ಶಾಸ್ತ್ರದ ಮೇಲೆ ಸಮಗ್ರವಾಗಿ ಹಿಡಿತವನ್ನು ಸಾಧಿಸಲು ಪ್ರಾಚೀನ ಗುರುಕುಲ ಪದ್ಧತಿಯಂತೆ ಹನ್ನೆರಡು ವರ್ಷಗಳ ನಿರಂತರ ಅಧ್ಯಯನ ಅತ್ಯವಶ್ಯ. ಹೀಗೆ ಸಗಿಯಾಗಿ ಶಾಸ್ತ್ರಾಧ್ಯಯನ ಮಾಡಿ ಜ್ಯೋತಿಷಿ ಎನಿಸಿಕೊಂಡವನು ಮಾತ್ರ ಪ್ರಶ್ನೆ ಜಾತಕಗಳ ಫಲನಿರೂಪಣೆ ಮಾಡಿದಲ್ಲಿ ಅದು ಸರಿ ಎನಿಸೀತು. ಜೊತೆಗೆ ಮಂತ್ರಸಿದ್ಧಿಯೂ ಅತ್ಯವಶ್ಯ.

**ದಶಭೇದಂ ಗ್ರಹಗಣಿತಂ ಜಾತಕಮವಲೋಕ್ಯ ನಿರವಶೇಷಮಪಿ ಯಃ ।**
**ಕಥಯತಿ ಶುಭಮಶುಭಂ ವಾ ತಸ್ಯ ನ ಮಿಥ್ಯಾ ಭವೇದ್ವಾಣೀ ॥**

**ಅನೇಕ ಹೋರಾತತ್ತ್ವಜ್ಞಃ ಪಂಚಸಿದ್ಧಾಂತಕೋವಿದಃ ।**
**ಊಹಾಪೋಹಪಟುಃ ಸಿದ್ಧಮಂತ್ರೋ ಜಾನಾತಿ ಜಾತಕಮ್ ॥**

ಎಂಬ ಶ್ಲೋಕಗಳು ಜ್ಯೋತಿಶ್ಶಾಸ್ತ್ರದಲ್ಲಿ ಅಧ್ಯಯನಕ್ಕಿರುವ ಮಹತ್ತ್ವವನ್ನು ಎತ್ತಿಹೇಳುತ್ತವೆ.

ಹೀಗಿರುತ್ತಾ ಬಹಳ ಖೇದದ ಸಂಗತಿ ಎಂದರೆ ಇಂದಿನ ಸಮಾಜದಲ್ಲಿ ಸರಿಯಾಗಿ ಶಾಸ್ತ್ರಾಧ್ಯಯನ ಮಾಡುವವರ ಸಂಖ್ಯೆ ದಿನದಿಂದ ದಿನಕ್ಕೆ ಕ್ಷೀಣಿಸುತ್ತಿದೆ. ಅದರ ಬದಲು ಶಾಸ್ತ್ರಾಧ್ಯಯನ ಮಾಡದೆ ಜ್ಯೋತಿಷಿ ಎನಿಸಿಕೊಂಡವರ ಸಂಖ್ಯೆ ನಿರಂತರ ಹೆಚ್ಚುತ್ತಿದೆ. ಇದರಿಂದ ಶಾಸ್ತ್ರವೇನೂ ಹಾಳಾಗದಿದ್ದರೂ ಜನರಿಗೆ ಸಮಗ್ರವಾಗಿ ಜ್ಯೋತಿಶ್ಶಾಸ್ತ್ರದ ಬಗ್ಗೆ ತಪ್ಪುಕಲ್ಪನೆಗಳು ಮೂಡುತ್ತವೆ. ಸರಿಯಾಗಿ ಅಧ್ಯಯನ ಮಾಡದೆ ಫಲ ಹೇಳಿದವನ ಮಾತು ಸುಳ್ಳಾದರೆ ಜನರು ಶಾಸ್ತ್ರವನ್ನೇ ಸುಳ್ಳೆಂದು ಜರೆಯುತ್ತಾರೆ. ಇದೊಂದು ಹೊಟ್ಟೆಪಾಡಿನ ವ್ಯವಸ್ಥೆ ಎಂದು ಥೂಗರೆಯುತ್ತಾರೆ. ಇದು ಜ್ಯೋತಿಶ್ಶಾಸ್ತ್ರದ ಆರೋಗ್ಯಕರ ಬೆಳವಣಿಗೆ ಎನಿಸಲಾರದು. ಸರಿಯಾದ ಅಧ್ಯಯನ ಅಧ್ಯಾಪನವಿಲ್ಲದಿದ್ದರೆ ಶಾಸ್ತ್ರದ ಪ್ರಾಚೀನ ಸಂಪ್ರದಾಯಗಳು ಮೂಲೆಗುಂಪಾಗುವುದು ಆಶ್ಚರ್ಯಕರ ಸಂಗತಿ ಏನಲ್ಲ. ಲೋಕಕಲ್ಯಾಣಕ್ಕಾಗಿ ಋಷಿಮುನಿಗಳು ಯಾವ ಉದಾತ್ತ ಧ್ಯೇಯದಿಂದ ಈ ಶಾಸ್ತ್ರವನ್ನು ಮುನ್ನಡೆಸಿದ್ದರೋ ಅದೀಗ ವಿಕೃತರೂಪ ಪಡೆಯುತ್ತಿದೆ. ಇದನ್ನೇ ಈ ಶ್ಲೋಕ ಸ್ಪಷ್ಟಪಡಿಸುತ್ತದೆ.

**ಶಿಷ್ಯಸ್ಯ ಬುದ್ಧಿಮಾಂದ್ಯಾದಾಚಾರ್ಯಸ್ಯೋಪದೇಶಸಂವರಣಾತ್ ।**
**ಪರಿಮುಷಿತಸಂಪ್ರದಾಯಾದಹಹ ಪರೇ ದೂಷಯಂತಿ ಶಾಸ್ತ್ರಾಣಿ ॥**

ಆದುದರಿಂದ ಇಂದಿನ ಯುವಪೀಳಿಗೆ ಶಾಸ್ತ್ರಾಧ್ಯಯನಕ್ಕೆ ಹೆಚ್ಚಿನ ಮಹತ್ತ್ವ ಕೊಟ್ಟು ಋಷಿಮುನಿಗಳ ಕಲ್ಪನೆಯ ಜ್ಯೋತಿಶ್ಶಾಸ್ತ್ರವನ್ನು ಜನತೆಯ ಮುಂದಿಡಬೇಕಾದದ್ದು ಅತ್ಯವಶ್ಯ. ಈ ದಿಸೆಯಲ್ಲಿ ಇಂತಹ ಶಾಸ್ತ್ರಾರ್ಥಗೋಷ್ಠಿಗಳು ಹೆಚ್ಚು ಹೆಚ್ಚು ನಡೆಯಬೇಕು. ಶಾಸ್ತ್ರಗಳ ನಿಜಸ್ವರೂಪವನ್ನು ಜನತೆ ತಿಳಿಯುವಂತಾಗಬೇಕು. ಆಗ ಮಾತ್ರ ಪ್ರಾಮಾಣಿಕತೆಗೆ, ಅಧ್ಯಯನಕ್ಕೆ, ಪ್ರಯತ್ನಕ್ಕೆ ಬೆಲೆ ಬರಲು ಸಾಧ್ಯ. ಅಜ್ಞಾನಾಂಧಕಾರ ದೂರವಾಗಿ ಜ್ಞಾನಜ್ಯೋತಿ ಬೆಳಗಲು ಸಾಧ್ಯ.

ಸರಿಯಾದ ಅಧ್ಯಯನದ ಕೊರತೆಯಿಂದಾಗಿ ವಿಕೃತ ಆಚಾರವಿಚಾರಗಳು ಈ ಶಾಸ್ತ್ರದಲ್ಲಿ ಬೆಳೆದುಬಂದಿವೆ. ಅವುಗಳಲ್ಲಿ ಒಂದೆರಡು ವಿಚಾರಗಳನ್ನು ಪ್ರಸ್ತುತಪಡಿಸಲಿಚ್ಛಿಸುತ್ತೇನೆ.

ಮೊದಲನೆಯದಾಗಿ, ನಮ್ಮ ಜಾತಕ ತಯಾರಿಯ ವಿಧಾನ. ಜನ್ಮದಿನಾಂಕ, ಜನ್ಮಸಮಯದಷ್ಟೇ ಜನ್ಮಸ್ಥಳವೂ ಮಹತ್ತ್ವವುಳ್ಳದ್ದೆಂದು ಎಷ್ಟೋ ಜ್ಯೋತಿಷಿಗಳೇ ತಿಳಿದಿಲ್ಲ. ಹೇಳಿದ ಕೂಡಲೇ ತಮ್ಮ ಊರಿಗೆ ಸರಿಯಾದ ಜನ್ಮ ಕುಂಡಲಿಯನ್ನು ಹಾಕಿಕೊಡುತ್ತಾರೆ. ಇದು ಎಷ್ಟೋ ಗಣಿತವ್ಯತ್ಯಾಸಗಳಿಗೆ ಕಾರಣವಾಗುತ್ತದೆ. ಗಣಿತವ್ಯತ್ಯಾಸದಿಂದ ಫಲದಲ್ಲೂ ವ್ಯತ್ಯಾಸ ಕಂಡುಬರುತ್ತದೆ. ಆದುದರಿಂದ ಜನ್ಮಸ್ಥಳಕ್ಕೆ ಅನುಗುಣವಾಗಿ ದೃಗ್ಗಣಿತಾನುಸಾರವಾಗಿ ಸ್ಫುಟ ಜಾತಕವನ್ನು ಮಾಡಿಸಿಕೊಳ್ಳುವುದು ಅತ್ಯವಶ್ಯ. ಆರ್ಯಭಟ ಪಂಚಾಂಗ, ಸೂರ್ಯಸಿದ್ಧಾಂತ ಪಂಚಾಂಗ ನೋಡಿ ಜಾತಕ ತಯಾರಿಸಿದರೆ ಶಿಷ್ಟದೆಶೆಯಲ್ಲಿ ವ್ಯತ್ಯಾಸ ಬಂದು, ಸಂಧಿಯ ಕಾಲಗಳು ವ್ಯತ್ಯಾಸವಾಗಿ ವಿಪದಾಪತ್ತುಗಳಿಗೆ

ಅವಕಾಶ ಬಂದೀತು. ಜಾತಕ ಮುಹೂರ್ತ ಪ್ರಶ್ನೆಗಳಿಗೆ ಸ್ಪಷ್ಟದೃಗ್ಗಣಿತಾನುಸಾರವಾಗಿಯೇ ಗ್ರಹಸ್ಥಿತಿಯನ್ನು ಸಿದ್ಧ ಪಡಿಸಿಕೊಳ್ಳಬೇಕು. ಇದನ್ನು ಜನರು ತಿಳಿದುಕೊಂಡರೆ ಈ ವಿಷಯದಲ್ಲಿ ತಪ್ಪುಗಳಾಗುವುದು ತಪ್ಪೀತು.

ಅಲ್ಲದೆ 'ನಮ್ಮ ಜಾತಕ ಸ್ವಲ್ಪ ನೋಡಿ' ಎಂದು ಒಂದು ಸಣ್ಣ ಹಾಳೆಯನ್ನು ತಂದುಕೊಡುತ್ತಾರೆ. ಅದರಲ್ಲಿ ಗ್ರಹಕುಂಡಲಿ, ಶಿಷ್ಟದೆಶೆ ಬಿಟ್ಟರೆ ಬೇರೇನೂ ವಿಶೇಷ ಇರುವುದಿಲ್ಲ. ಹೆಚ್ಚಿನದರಲ್ಲಿ ಅಂಶಕ ಇದ್ದರೆ ಮತ್ತೆ ಕೆಲವಲ್ಲಿ ಅಂಶಕದ ನಿರ್ದೇಶವೂ ಇರುವುದಿಲ್ಲ. ಹೀಗೆ ತಂದುಕೊಟ್ಟು ಫಲ ಹೇಳಿ ಎಂದರೆ ಪ್ರಾಮಾಣಿಕವಾಗಿ ಅಧ್ಯಯನ ಮಾಡಿದ ಓರ್ವ ಜ್ಯೋತಿಷಿ ಚಡಪಡಿಸುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಫಲವನ್ನು ಸರಿಯಾಗಿ ವಿಮರ್ಶಿಸಲು ಇದು ಸಾಕಾಗುವುದಿಲ್ಲ. ಸಾಂಶಗ್ರಹಚಕ್ರದೊಂದಿಗೆ, ಗ್ರಹಸ್ಫುಟಗಳು, ದ್ವಾದಶಭಾವಸ್ಫುಟಗಳು, ಸಂಧಿಸ್ಫುಟಗಳು, ಚಲನಭಾವ ಗ್ರಹಸ್ಥಿತಿಗಳು ಅತ್ಯವಶ್ಯ. ಏಕೆಂದರೆ ಭಾವಫಲಗಳನ್ನು, ಭಾವಸ್ಥಿತಿಯನ್ನು ನೋಡಿ ಹೇಳಬೇಕೇ ಹೊರತು ರಾಶಿಸ್ಥಿತಿಯಿಂದಲ್ಲ. 'ವಿನಾ ಚಲಿತಚಕ್ರೇಣ ಮೃಷೋಕ್ತಂ ಭಾವಜಂ ಫಲಮ್' ಎಂಬುದು ಅಕ್ಷರಶಃ ಸತ್ಯ. ಅಲ್ಲದೆ ಭಾವಮಧ್ಯದಲ್ಲಿರುವ ಗ್ರಹ, ಆ ಭಾವಫಲವನ್ನು ಪೂರ್ಣವಾಗಿ ನೀಡಿದರೆ, ಅಂತ್ಯದಲ್ಲಿರುವ ಗ್ರಹನು ಫಲವನ್ನು ನೀಡಲಾರನು.

> ಭಾವಾಂಶತುಲ್ಯಃ ಖಲು ವರ್ತಮಾನಭಾವೋದ್ಭವಂ ಪೂರ್ಣಫಲಂ ವಿಧತ್ತೇ ।
> ಭಾವೋನಕೇ ಚಾಭ್ಯಧಿಕೇ ಚ ಖೇಟೇ ತ್ರೈರಾಶಿಕೇನಾತ್ರ ಫಲಂ ಪ್ರಕಲ್ಪ್ಯಮ್ ॥
> ವದಂತಿ ಭಾವೈಕ್ಯದಲಂ ಹಿ ಸಂಧಿಂ ತತ್ರ ಸ್ಥಿತಃ ಸ್ಯಾದಫಲೋ ಗ್ರಹೇಂದ್ರಃ ॥

ಇತ್ಯಾದಿ ಫಲನಿರ್ದೇಶನದ ಮೂಲನಿಯಮಗಳನ್ನೇ ಗಾಳಿಗೆ ತೂರಿ ಹೇಳುವ ಫಲಗಳು ಎಷ್ಟು ಅನುಭವಕ್ಕೆ ಬಂದೀತು? ವಿವಾಹಘಟನೆಯನ್ನು ತೋರಿಸುವಾಗಲೂ ಅಷ್ಟೆ, ಎರಡು ಚಿಕ್ಕ ಹಾಳೆಗಳನ್ನು ತರುತ್ತಾರೆ. ''ನೋಡಿ ಹೇಳಿ'' ಎನ್ನುತ್ತಾರೆ. ನಿಜವಾಗಿ ಇದರಿಂದ ನಿರ್ಣಯಿಸಿ ಹೇಳಲು ಸಾಧ್ಯವೇ? ಸಪ್ತಮಭಾವದಲ್ಲಿ ಕುಜನಿದ್ದರೆ ಕುಜ ದೋಷವಷ್ಟೇ. ಗ್ರಹಕುಂಡಲಿಯಲ್ಲಿ ಸಪ್ತಮದಲ್ಲಿರುವ ಕುಜನು ಭಾವಸ್ಥಿತ್ಯಾ ಷಷ್ಠಕ್ಕೆ ಬರಬಹುದು. ಆಗ ಕುಜದೋಷ ಹೇಳಿದುದು ತಪ್ಪಾಗಲಿಲ್ಲವೇ?

ಈ ರೀತಿ ಭಾವಸ್ಫುಟ ಸಂಧಿಸ್ಫುಟಾದಿಗಳಿಂದ ಕೂಡಿದ ಜಾತಕವಾದರೆ ಮಾತ್ರ ಫಲನಿರ್ದೇಶ ಸುಲಭ. ಇದರಿಂದ ಗ್ರಹಕುಂಡಲಿಯಲ್ಲಿ ಕಾಣುವ ದೊಡ್ಡದೊಡ್ಡ ಯೋಗ ಇಲ್ಲವಾದಾವು! ಇಲ್ಲದ ಯೋಗಗಳು ಸೃಷ್ಟಿಯಾದಾವು! ಆದ್ದರಿಂದ ಸ್ಫುಟ, ಸ್ಪಷ್ಟವಾದ ಜಾತಕದಿಂದ ಮಾತ್ರ ಸರಿಯಾದ ಫಲವಿಮರ್ಶೆ ಸಾಧ್ಯ.

ಇದಕ್ಕೆಂದೇ ವರಾಹಮಿಹಿರನ ಉದ್ಘೋಷಃ

> ತಂತ್ರೇ ಸುಪರಿಜ್ಞಾತೇ ಲಗ್ನೇ ಛಾಯಾಂಬುಯಂತ್ರಸಂವಿದಿತೇ ।
> ಹೋರಾರ್ಥೇ ಚ ಸುರೂಢೇ ನಾದೇಷ್ಟುರ್ಭಾರತೀ ವಂಧ್ಯಾ ॥

'ಯದುಪಚಿತಮನ್ಯಜನ್ಮನಿ ಶುಭಾಶುಭಮ್' ಎಂದು ಜನ್ಮಾಂತರದ ಶುಭಾಶುಭಕರ್ಮಗಳಿಗನುಸಾರವಾಗಿ, ಈ ಜನ್ಮದ ಸ್ಥಿತಿಗತಿಯನ್ನು ನವಗ್ರಹಗಳು ಜಾತಕದ ಮೂಲಕ ತಿಳಿಸುತ್ತಾರೆ. ಇದನ್ನು ಅರಿಯುವ ಶಾಸ್ತ್ರವೇ ಜ್ಯೋತಿಶ್ಶಾಸ್ತ್ರ. ಇದು ಶಾಸ್ತ್ರದ ಮೂಲಸಿದ್ಧಾಂತ. ಪೂರ್ವಸುಕೃತದಿಂದ ಸುಖವೂ ಪೂರ್ವದುಷ್ಕೃತದಿಂದ ದುಃಖವೂ ಉಂಟಾಗುವುದು. ಈ ಕರ್ಮಫಲಕ್ಕೆ ಅನುಸಾರವಾಗಿ ಎಲ್ಲವೂ ನಡೆಯಲು ಜಾತಕವೇ ಸಾಕಲ್ಲವೇ? ಪ್ರಶ್ನಶಾಸ್ತ್ರವೇಕೆ? ಎಂದು ಪ್ರಶ್ನೆ ಬರುವುದು ಸಹಜ. ಇದಕ್ಕೆಂದೇ ಪ್ರಶ್ನಶಾಸ್ತ್ರ ಆರಂಭದ ಉದ್ದೇಶ ಹೇಳಿದ್ದಾರೆಃ

> ಕಸ್ಯ ಪಕ್ತಿರಿತಿ ಜ್ಞಾತುಮಿದಾನೀಂ ಪೂರ್ವಕರ್ಮಣಾಮ್ ।
> ಇಹಾರ್ಜಿತಂ ಚ ವಿಜ್ಞಾತುಂ ಕರ್ಮಪ್ರಶ್ನೋ ವಿಧೀಯತೇ ॥

ಈಗ ಅನುಭವಿಸುತ್ತಿರುವ ಶುಭಾಶುಭಫಲವು ಪೂರ್ವಜನ್ಮದ ಕರ್ಮಫಲವೋ ಈ ಜನ್ಮದ್ದೋ ಎಂಬುದನ್ನು ತಿಳಿಯಲು ಪ್ರಶ್ನಕರ್ಮದಿಂದ ಮಾತ್ರ ಸಾಧ್ಯ. ಅಲ್ಲದೆ ಚೋರಪ್ರಶ್ನೆ, ಹಾನಿಪ್ರಶ್ನೆ, ಗಮನವಿಚಾರ, ದೇವಪ್ರಶ್ನೆ

ಇತ್ಯಾದಿಗಳನ್ನು ಪ್ರಶ್ನಶಾಸ್ತ್ರದಿಂದ ಮಾತ್ರ ತಿಳಿಯಬಹುದು. ಹೀಗಿರುವಾಗ ಪ್ರಾಗ್ಜನ್ಮ ಈ ಜನ್ಮಗಳ ಕರ್ಮವಿಭಾಗ ತಿಳಿಯುವ ಬಗೆ ಹೇಗೆ? ಅದನ್ನು ಹೀಗೆ ತಿಳಿಸಿದ್ದಾರೆ:

ಯದಾ ಜಾತಕತಃ ಪ್ರಶ್ನೋ ಗುಣದೋಷೈರ್ವಿಭಿದ್ಯತೇ ।
ತದಾ ಶುಭಾಶುಭಂ ವಿದ್ಯಾತ್ ಕರ್ಮಭೇದೈರಿಹಾರ್ಜಿತೈಃ ॥

ಯದಾನುಸರತಿ ಪ್ರಶ್ನೋ ಜಾತಕಂ ಗ್ರಹಭಾದಿಭಿಃ ।
ತದಾ ಪ್ರಾಕ್ಕರ್ಮಪಾಕಃ ಸ್ಯಾದಿತ್ಯಾದ್ಯೂಹ್ಯಂ ಹಿ ಧೀಮತಾ ॥

ಪ್ರಕೃತ ಕಾಲದಲ್ಲಿ ಜಾತಕದ ಫಲ ಗುಣವಾಗಿದ್ದು ಪ್ರಶ್ನೆಯ ಫಲ ದೋಷವಾಗಿದ್ದರೆ, ,ಈ ಜನ್ಮದ ಕರ್ಮದೋಷದಿಂದ ದೋಷಫಲ ಎನ್ನಬೇಕು.

ಒಂದು ವೇಳೆ ಗ್ರಹನಕ್ಷತ್ರರಾಶ್ಯಾದಿಗಳಿಂದ ಜಾತಕಫಲವೂ ಪ್ರಶ್ನಫಲವೂ ಏಕರೀತಿಯಲ್ಲಿದ್ದರೆ ಆಗ ಪ್ರಾಗ್ಜನ್ಮದ ದೋಷಫಲ ಎನ್ನಬೇಕು.

ಹೀಗಿದೆ ಪ್ರಶ್ನೆ ಮತ್ತು ಜಾತಕಗಳ ನಡುವಿನ ಶಾಸ್ತ್ರೀಯ ವ್ಯವಸ್ಥೆ. ಆದರೆ ಈಗ ಪ್ರಶ್ನೆ ಕೇಳುವಾಗ ಜಾತಕ ತೆಗೆದುಕೊಂಡು ಹೋಗುವ ಅಥವಾ ನೋಡುವ ಪರಿಪಾಟಿ ಮಾಯವಾಗುತ್ತಿದೆ.

ಆದ್ದರಿಂದ ಪ್ರಶ್ನೆ ಕೇಳುವವರು ಜಾತಕವನ್ನೂ ಜೊತೆಗೆ ಕೊಂಡೊಯ್ಯುವುದು ಅಗತ್ಯ. ಪ್ರಶ್ನೆ ಹೇಳುವವರು ಜಾತಕವನ್ನು ಜೊತೆಗೆ ವಿಮರ್ಶಿಸದೆ ಪ್ರಶ್ನೆ ಹೇಳುವುದನ್ನು ಮುಂದುವರಿಸುವಂತಿಲ್ಲ. ಈ ಒಂದು ವ್ಯವಸ್ಥೆ ನಮ್ಮ ರೂಢಿಯಿಂದ ಬಿಟ್ಟುಹೋಗುವುದನ್ನು ತಪ್ಪಿಸಿ, ಆದಷ್ಟು ಶಾಸ್ತ್ರೀಯವಿಮರ್ಶೆ ನಡೆಸುವಂತಹ ಭಾರ ಜ್ಯೋತಿಷಿಗಳ ಮೇಲೆ ಇದೆ.

ಇನ್ನು ಪ್ರಶ್ನೆಯನ್ನು ಕೇಳುತ್ತಾರೆ, ಬೇಕಾದರೆ ಲಕ್ಷಗಟ್ಟಲೆ ಹಣ ಖರ್ಚುಮಾಡಿ ಅಷ್ಟಮಂಗಲಪ್ರಶ್ನೆಯನ್ನೇ ನಡೆಸುತ್ತಾರೆ. ಆದರೆ ಪ್ರಶ್ನೆ ಕೇಳುವಾಗ ಇರುವ ಉತ್ಸಾಹ ಪರಿಹಾರ ಮಾಡುವುದರಲ್ಲಿ ಕಾಣುವುದಿಲ್ಲ. ಅನೇಕ ಸಲ ಪ್ರಶ್ನೆ ಕೇಳಿ ಅದರಲ್ಲಿ ಹೇಳಿದ ಪರಿಹಾರ ಮಾಡದೇ ಸುಮ್ಮನೆ ಕುಳಿತುಕೊಳ್ಳುತ್ತಾರೆ. ಇದೇ ಒಂದು ದೋಷವಾಗಿ ಪರಿಣಮಿಸುತ್ತದೆ. ಅಲ್ಲದೆ ಪ್ರಶ್ನೆ ಕೇಳಿ ದೋಷಗಳಿಗೆ ಪರಿಹಾರವನ್ನು ಆದಷ್ಟು ಶೀಘ್ರದಲ್ಲಿ ಮಾಡಬೇಕು. 'ಸಂವತ್ಸರಾಂತರ್ಗತವರ್ತಮಾನಮ್' ಎಂಬ ನ್ಯಾಯದಂತೆ ಒಂದು ವರ್ಷದೊಳಗೆ ಪರಿಹಾರಮಾಡಿ ಮುಗಿಸಬೇಕು. ರೋಗಕ್ಕೆ ಮದ್ದುಮಾಡಲು ಯಾರಾದರೂ ತಡವರಿಸುತ್ತಾರೆಯೇ? ಇದರಿಂದ ದೋಷ ದೃಷ್ಟವಾದ ಕೂಡಲೇ ಪರಿಹಾರವನ್ನು ತಿಳಿದು ನಡೆಸಬೇಕಾದ್ದು ಅತ್ಯವಶ್ಯ.

ಇನ್ನು ಕೆಲವು ಜನರಿದ್ದಾರೆ, ಅವರಿಗೆ ಕೇಳಿದಷ್ಟು ಮುಗಿಯುವುದಿಲ್ಲ. ಜ್ಯೋತಿಷಿಗಳನ್ನು ಕಂಡಕೂಡಲೇ ಪ್ರಶ್ನೆ ಕೇಳಬೇಕು. ಇದು ಸರಿಯಲ್ಲ. ನಮಗೆ ಯಾವ ಜ್ಯೋತಿಷ್ಯನ ಮೇಲೆ ವಿಶ್ವಾಸವಿದೆಯೋ ಅಂತಹ ಶಾಸ್ತ್ರಜ್ಞನಾದ ಜ್ಯೋತಿಷಿಯಲ್ಲಿ ಒಂದೇ ಬಾರಿ ಕೇಳುವುದು ನಿಜವಾದ ಧರ್ಮ. ೨೫ ಜನರಲ್ಲಿ ೨೫ ಸಾರಿ ಕೇಳುವುದು ಸರ್ವಥಾ ನಿಷಿದ್ಧ. ಇದಕ್ಕೆಯೇ

'ಹೋರಾಂಗತಂತ್ರಕುಶಲಾನ್ ಹಿತಕಾರಿಣಶ್ಚ ಸಂಗೃಹ್ಯ ದೈವಗಣಕಾನ್ ಸಕೃದೇವ ಪೃಚ್ಛೇತ್'

ಎಂದಿದ್ದಾರೆ.

ಆದ್ದರಿಂದ ಪ್ರಶ್ನೆ ಕೇಳುವವರು, ಅಷ್ಟಮಂಗಲ ಪ್ರಶ್ನೆ ನಡೆಸುವವರೂ ಪರಿಹಾರವನ್ನು ಮಾಡುವುದಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನು ಮಾಡಿಕೊಂಡೇ ಪ್ರಶ್ನೆಯನ್ನು ಕೇಳುವುದು ಅಗತ್ಯ. ಇಲ್ಲವಾದಲ್ಲಿ ಗಾಯದ ಮೇಲೆ ಬರೆ ಎಳೆದಂತೆ ದೋಷದ ಮೇಲೆ ದೋಷವನ್ನು ಸೇರಿಸಿದಂತಾಗುವುದು.ಇರಲಿ, ಏನೇ ಆದರೂ ಈಗ ಜ್ಯೋತಿಶ್ಶಾಸ್ತ್ರ ವಿಶ್ವದೆಲ್ಲೆಡೆ ಅತ್ಯಂತ ಜನಪ್ರಿಯ. ಆದರೆ ಇದರ ಪ್ರಾಚೀನ ವಿಚಾರಸರಣಿಯನ್ನು ಸ್ಪಷ್ಟವಾಗಿ ವಿಶ್ವದ

ಮುಂದೆ ತೆರೆದಿಡಬೇಕಾದ ಜವಾಬ್ದಾರಿ ಈಗಿನ ತರುಣ ಜ್ಯೋತಿಷ್ಕರ ಮೇಲೆ ಇದೆ. ಇದಕ್ಕಾಗಿ ಸಂಸ್ಕೃತದ ಆಳವಾದ ಅಧ್ಯಯನವೂ ಅಗತ್ಯ. ವ್ಯಾಕರಣಕೋಶಾದಿಗಳನ್ನು ತಿಳಿಯದೆ ಶ್ಲೋಕವನ್ನು ಸರಿಯಾಗಿ ಅರ್ಥೈಸುವುದು ಸಾಧ್ಯವಿಲ್ಲ. ಆದ್ದರಿಂದ ಸಂಸ್ಕೃತಜ್ಞಾನದ ಜೊತೆಗೆ ಜ್ಯೋತಿಶ್ಶಾಸ್ತ್ರದ ಅಧ್ಯಯನ ಮಾಡಬೇಕು. ಅಲ್ಲದೆ ಆಧುನಿಕ ಪ್ರಪಂಚಕ್ಕೆ ಈ ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸಲು ಇಂಗ್ಲಿಷ್ ಭಾಷೆಯ ಜ್ಞಾನವನ್ನೂ ಪಡೆಯಬೇಕು. ಜೊತೆಗೆ ಕಂಪ್ಯೂಟರ್ ಜ್ಞಾನವೂ ಬೇಕು. ಇದರಿಂದ ಪ್ರಾಚೀನ ಗಣಿತಪದ್ಧತಿಗಳನ್ನು ಹೊರ ಪ್ರಪಂಚಕ್ಕೆ ತಿಳಿಸಬಹುದಾಗಿದೆ. ಅಲ್ಲದೆ ಪಂಡಿತರೆಲ್ಲರೂ ಆಗಾಗ ಭೇಟಿಯಾಗುತ್ತಾ ಜ್ಞಾನದ ವಿನಿಮಯ ಮಾಡಿಕೊಳ್ಳಬೇಕು. ಇದಕ್ಕಾಗಿ ಈ ರೀತಿ ಶಾಸ್ತ್ರಾರ್ಥಗೋಷ್ಠಿಗಳನ್ನು ಸಂಘಟಿಸಬೇಕು. ಇದರಿಂದ ಶಾಸ್ತ್ರದ ನೈಜಚಿತ್ರಣ ಜನತೆಗೂ ದೊರೆಯುವಂತಾಗುತ್ತದೆ. ಹಾಗೆಯೇ ಶಾಸ್ತ್ರರಕ್ಷಣೆಯೂ ಆದಂತಾಗುತ್ತದೆ.

ಈ ಶಾಸ್ತ್ರಮಥನ ಕಾರ್ಯಕ್ರಮದಲ್ಲಿ ನನ್ನನ್ನೂ ಭಾಗಿಯನ್ನಾಗಿ ಮಾಡಿದ ಸಂಪ್ರತಿಷ್ಠಾನದ ಕಾರ್ಯಕರ್ತರಿಗೆ ಹಾಗೂ ನಿಮ್ಮೆಲ್ಲರಿಗೆ ಪುನಃ ವಂದಿಸಿ ಭಾಷಣವನ್ನು ಮುಗಿಸುತ್ತೇನೆ.

'ಲೋಕಾಃ ಸಮಸ್ತಾಃ ಸುಖಿನೋ ಭವಂತು'

* * *

ರಾಜದ್ರೋಹಂ ಚ ಚೋರತ್ವಂ ಸ್ತ್ರೀದೋಷಂ ನಿಧಿದರ್ಶನಮ್ ।
ಅನರ್ಥಾಪಾದಕಂ ಕರ್ಮ ಜ್ಞಾತಮಪ್ಯಪ್ರಕಾಶಯೇತ್ ॥

ರಾಜದ್ವೇಷ, ಕಳ್ಳತನ, ಸ್ತ್ರೀದೋಷ, ನಿಧಿಯಿರುವಿಕೆ ಹಾಗೂ ಭವಿಷ್ಯದಲ್ಲಿ ಅನರ್ಥಜನಕವಾದ ಯಾವುದೇ ವಿಚಾರಗಳನ್ನು ಗ್ರಹಸ್ಥಿತಿಯಿಂದ ತಿಳಿದರೂ ಒಮ್ಮೆಲೇ ಹೇಳಬಾರದು.

# ನಾ ಕಂಡಂತೆ ಗುರುದೇವ

● ಪಾವಂಜೆ ವಾಸುದೇವ ಭಟ್

ದೈವಜ್ಞರು

ಇಪ್ಪತ್ತು ಇಪ್ಪತ್ತೊಂದು ವರ್ಷಗಳ ಕೆಳಗೆ ವೇದಾಂತ ಅಧ್ಯಯನದಲ್ಲಿ ನಿರತನಾಗಿದ್ದೆ. ಆ ಸಮಯದಲ್ಲಿ ವೇದಾಭ್ಯಾಸವನ್ನು ಮುಗಿಸಿದ ಬಳಿಕ ತತ್ತ್ವಶಾಸ್ತ್ರದ ಬಗ್ಗೆ ಒಲವು. ಅದಕ್ಕಾಗಿ ಪಲಿಮಾರು ಕಿರಿಯ ಶ್ರೀಗಳು (ವಿದ್ಯಾಧೀಶತೀರ್ಥರು) ಮತ್ತು ಅದಮಾರು ಕಿರಿಯ ಶ್ರೀಗಳು ಇವರ ಶಿಷ್ಯವೃಂದದಲ್ಲಿ ಸೇರಿಕೊಂಡೆ. ಸ್ವಲ್ಪ ಸಮಯದಲ್ಲಿ ತತ್ತ್ವಜ್ಞಾನದ ಅಂತಿಮ ಫಲವಾದ ಮೋಕ್ಷಪ್ರಾಪ್ತಿಯ ಆಸೆಯನ್ನು ಬಿಟ್ಟುಬಿಟ್ಟೆ. ಆದರೂ ಇಬ್ಬರೂ ಶ್ರೀಗಳು ನನ್ನನ್ನು ಬಿಡಲಿಲ್ಲ. ಭಗೀರಥಪ್ರಯತ್ನಪೂರ್ವಕ ತತ್ತ್ವಶಾಸ್ತ್ರದ ವಿಷಯಗಳನ್ನು ನನ್ನ ತಲೆಯೊಳಗೆ ಹೊಕ್ಕಿಸುವಲ್ಲಿ ಕೊನೆಗೂ ಸಫಲರಾದರು. ಇದರ ಫಲರೂಪವಾದ ಶಾಸ್ತ್ರದ ತತ್ತ್ವವು, ದೈವಜ್ಞನಾಗಿರತಕ್ಕ ನನ್ನ ಜೀವನದಲ್ಲಿ ಅದು ಎಷ್ಟು ಉಪಯೋಗವಾಯಿತೆಂದರೆ "ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ" ಎಂಬಂತೆ ಮನುಷ್ಯನ ಜೀವನದ ಎಲ್ಲಾ ಕರ್ಮಗಳ ಮುಖ್ಯ ಉದ್ದೇಶ (ultimate goal) ತತ್ತ್ವಶಾಸ್ತ್ರದಲ್ಲಿಯೇ ಸಮಾಪ್ತಿ, ಎಲ್ಲದಕ್ಕೂ ಇದೇ ಉತ್ತರ ಎಂದು ಮನವರಿಕೆಯಾಯಿತು.

ಇದಾದ ಸ್ವಲ್ಪ ಸಮಯದ ಅನಂತರ, ಅದೊಂದು ದಿನ ಪಲಿಮಾರು ಕಿರಿಯ ಶ್ರೀಗಳಾದ ವಿದ್ಯಾಧೀಶ ತೀರ್ಥರು ಮುಂದೆ ಹೇಳತಕ್ಕ ವಿಷಯವನ್ನು ಅವರ ಶಿಷ್ಯರಾದ ನಮ್ಮಲ್ಲಿ ಪ್ರಸ್ತಾವಿಸಿದರು. ಈಗ ಎಲ್ಲ ಮನೆ, ಮಠ, ಮಂದಿರಗಳಲ್ಲಿ ಅಷ್ಟಮಂಗಳಪ್ರಶ್ನೆಯಾಗುತ್ತದೆ. ಈ ಎಲ್ಲ ಪ್ರಶ್ನೆಗಳಲ್ಲಿ ಜ್ಯೋತಿಷಿಗೆ ಮುಖ್ಯವಾಗಿ ಕಂಡುಬರುವಂತಹ ದೋಷ ಎಂದರೆ, ದೇವಸ್ಥಾನಗಳಲ್ಲಿ ಪೂಜೆ ಸರಿಯಾಗುವುದಿಲ್ಲ, ಶಾಲಗ್ರಾಮವಿಟ್ಟು ಪೂಜೆ ಮಾಡುವುದೇ ದೊಡ್ಡ ದೋಷ ಇತ್ಯಾದಿ. ಶಾಸ್ತ್ರೀಯ, ಸಂಪ್ರದಾಯ, ಶಿಷ್ಟಾಚಾರಕ್ಕೆ ವಿರುದ್ಧವಾದ ಅಶಾಸ್ತ್ರೀಯ ಭವಿಷ್ಯವಾಣಿಗಳು ಬರುತ್ತಾ ಇವೆ. ಈ ವಿಚಾರದಿಂದ ಮನನೊಂದ ಶ್ರೀಗಳು ನಮ್ಮ ಸಂಪ್ರದಾಯ, ಧರ್ಮಶಾಸ್ತ್ರ, ಶಿಷ್ಟಾಚಾರಕ್ಕೆ ಅನುಗುಣವಾಗಿ 'ಅಷ್ಟಮಂಗಲಪ್ರಶ್ನೆ'ಯನ್ನು ಮಾಡತಕ್ಕ ಸಮರ್ಥವಾದ ಜ್ಯೋತಿಷಿಗಳನ್ನು ಸಮಾಜಕ್ಕೆ ಕೊಡುಗೆಯನ್ನಾಗಿ ನೀಡಬೇಕು ಎಂಬುದಾಗಿ ಆಲೋಚನೆ ಮಾಡಿ ಈ ವಿಚಾರವನ್ನು ಅವರ ಶಿಷ್ಯರಾದ ನಮ್ಮ ಹತ್ತಿರ, ವಿಶೇಷವಾಗಿ ನನ್ನ ಮೇಲೆ ಗಮನವಿಟ್ಟು ಪ್ರಸ್ತಾವಿಸಿದರು. ನನಗಾದರೂ ತತ್ತ್ವಶಾಸ್ತ್ರಗಳನ್ನು ಬಿಟ್ಟು ಇತರ ಬೇರೆ ಯಾವುದೇ ವಿಚಾರಗಳಲ್ಲಿ ಆಸಕ್ತಿಯೂ ಇರಲಿಲ್ಲ. ಈ ಸಮಯಕ್ಕೆ ಸರಿಯಾಗಿ ನಮ್ಮ ಪಿತೃಪಾದರಿಂದಲೂ "ನಾಲ್ ಕಾಸ್ ಸಂಪಾದನೆ ಅಂಪುಣೊ ಸಾದಿ ಸೂಲಣೆ. ಈ ವೇದಾಂತನ್ ಪಸೊಂತು ಜಾದಂಪುಣ?" (ನಾಲ್ಕು ಕಾಸು ಸಂಪಾದನೆ ಮಾಡುವ ದಾರಿ ನೋಡಪ್ಪಾ, ಈ ವೇದಾಂತವನ್ನು ಹಿಡಿದುಕೊಂಡು ಏನು ಮಾಡುವುದು?) ಎಂಬ ಹೇಳಿಕೆಯೂ ಬಹಳಷ್ಟು ಬರುತ್ತಿತ್ತು. ಒಂದು ದಿವಸ, ಮನೋನಿಯಾಮಕನಾದ ಮಹಾರುದ್ರನ ಪ್ರೇರಣೆಯಿಂದ, ಸಮಾಜದ ಸಜ್ಜನರ ಸ್ವಾಸ್ಥ್ಯಕ್ಕೋಸ್ಕರ ಹಾಗೂ ಆಚಾರ್ಯಮಧ್ವರ ಸಂದೇಶವನ್ನು ಆಚರಣೆ ಮಾಡತಕ್ಕ ಶಿಷ್ಯರ ಒಳಿತಿಗೂ ಜ್ಯೋತಿಃಶಾಸ್ತ್ರದ ಪ್ರಾಮಾಣಿಕವಾದ ಮತ್ತು ಶಾಸ್ತ್ರೀಯ ನಿರ್ದೇಶನವನ್ನು ಸಮಾಜಕ್ಕೆ ಕೊಡಬೇಕು ಎಂದು ಜ್ಯೋತಿಃಶಾಸ್ತ್ರವನ್ನು ಕಲಿಯಲು ಉತ್ಸುಕನಾಗಿರುವೆ. ಇದಕ್ಕೆ ಸರಿಯಾದ ಗುರುಗಳನ್ನು ತೋರಿಸಿ ಎಂದು ಶ್ರೀಗಳಲ್ಲಿ ವಿಜ್ಞಾಪಿಸಿದೆ.

ಇದನ್ನು ಕೇಳಿ ಶ್ರೀಗಳು ಮಂದಹಾಸ ಬೀರಿ, ರಥಬೀದಿಯಲ್ಲಿ ಇರತಕ್ಕ ಭೀಮನಕಟ್ಟೆ ಮಠದಲ್ಲಿ ಆಚಾರ್ಯ ಗಣಪತಿ ಎಂಬವರನ್ನು ನೇಮಿಸುವುದಾಗಿ ಅಪ್ಪಣೆಯಿತ್ತರು. ತದನಂತರ ಶ್ರೀಗಳವರ ಪತ್ರವನ್ನು ಗಣಪತಿ ಆಚಾರ್ಯರಿಗೆ ತೋರಿಸಿದೆ. ತತ್‌ಕ್ಷಣ ಜ್ಯೋತಿಶ್ಶಾಸ್ತ್ರದ ಗಾಂಭೀರ್ಯವನ್ನು, ಅಗಾಧತೆಯನ್ನು, ಪ್ರಾಚೀನತೆಯನ್ನು ಹೇಳತೊಡಗಿ,ವರಾಹಮಿಹಿರಕೃತ ಬೃಹಜ್ಜಾತಕದ ೧೦-೧೫ ಶ್ಲೋಕಗಳನ್ನು ಪ್ರತಿದಿನ ಪಾಠಮಾಡಲು

ಪ್ರಾರಂಭಿಸಿದರು. ಈ ರೀತಿಯಾಗಿ ಸುಮಾರು ೩೦ ದಿವಸಗಳಲ್ಲಿ ಸರಿಸುಮಾರು ೨೫೦ ಶ್ಲೋಕಗಳನ್ನು ಮುಗಿಸಿಯೇ ಬಿಟ್ಟರು. ಇಷ್ಟಾದರೂ ನನಗೆ ಬೃಹಜ್ಜಾತಕದ ಪ್ರಾರಂಭಿಕ ಶ್ಲೋಕವಾದ 'ಮೂರ್ತಿತ್ವೇ' ಎಂಬ ಶ್ಲೋಕವು ಒದಲೂ ಬರಲಿಲ್ಲ. ದಿನಗಳೆದಂತೆ ಜ್ಯೋತಿಶ್ಶಾಸ್ತ್ರವನ್ನು ಕಲಿಯಬೇಕೆಂಬ ಉತ್ಸುಕತೆಯು ಕುಂದುತ್ತಾ ಬರತೊಡಗಿತು. ಈ ಸಮಯದಲ್ಲಿ ಪಲಿಮಾರು ಶ್ರೀಗಳಿಗೆ ಬೈಲೂರು ಅನಂತಪದ್ಮನಾಭ ತಂತ್ರಿಗಳೆಂಬವರು ಜ್ಯೋತಿಃಶಾಸ್ತ್ರವನ್ನು ಹೇಳಿಕೊಡಲು ಬರುತ್ತಾರೆ ಮತ್ತು ಬಹಳಷ್ಟು ವಿದ್ಯಾರ್ಥಿಗಳು ಅವರಲ್ಲಿ ನಿತ್ಯವೂ ಪಾಠಗಳನ್ನು ಕಲಿಯುತ್ತಾರೆ ಎಂದು ಕೇಳಿಸಿಕೊಂಡೆ. ಇದನ್ನು ತಿಳಿದು ಶ್ರೀಗಳವರಲ್ಲಿ ಪುನಃ ವಿನಂತಿಸಿಕೊಂಡೆ. ನನ್ನ ಬೌದ್ಧಿಕತೆಯ ಕೊರತೆ ಯಿಂದಾಗಿ ಆಚಾರ್ಯಗಣಪತಿಯವರಲ್ಲಿ ಅಭ್ಯಸಿಸಲು ಅಸಮರ್ಥನಾದುದನ್ನು ಮನವರಿಕೆ ಮಾಡಿಕೊಂಡ ಶ್ರೀಗಳು "ಶ್ರೀಯುತ ತಂತ್ರಿಯವರಲ್ಲಿ ವಿಚಾರ ಮಾಡಿ ಹೇಳುವೆ" ಎಂದರು.

ಸ್ವಲ್ಪ ದಿನಗಳ ಅನಂತರ ಶ್ರೀಗಳವರ ಆದೇಶಪ್ರಕಾರ ಅನಂತಪದ್ಮನಾಭ ತಂತ್ರಿಯವರ ಮನೆಗೆ ಹೋದೆ. ಆದರೆ ಮಾನಸಿಕವಾಗಿ ಮುಜುಗರ. ಒಂದು ಗುರುಗಳನ್ನು ಬಿಟ್ಟು ಇನ್ನೊಂದು ಗುರುಗಳನ್ನು ಆಶ್ರಯಿಸುವುದು ಉಚಿತವೋ ಅನುಚಿತವೋ ಎಂಬ ಗೊಂದಲವುಂಟಾಯಿತು. ಇದಕ್ಕೆ ಸಮರ್ಪಕವಾದ, ಆಚಾರ್ಯಮಧ್ವರ ಸಂದೇಶವೊಂದು ನೆನಪಿಗೆ ಬಂತು:

ಏಕಸ್ಯ ಶಿಷ್ಯತಾಂ ಪ್ರಾಪ್ಯ ತದಾಜ್ಞಾಂ ನ ವಿನಾ ಸಮಮ್ ।
ಅವರಂ ವಾ ವ್ರಜೇದುಚ್ಚಗುಣಶ್ಚೇನ್ನೈವ ದುಷ್ಯತಿ ॥

ನಾನು ಹೋದಾಗ ತಂತ್ರಿಯವರು ದೇವಪೂಜಾನಿರತರಾಗಿದ್ದರು. ಆ ಹೊತ್ತಿನಲ್ಲಿ ನಮ್ಮ ಇರುವಿಕೆಯನ್ನು ಅವರ ಧರ್ಮಪತ್ನಿ ತಂತ್ರಿಗಳಿಗೆ ಹೇಳಿದರು. ಅವರು– 'ಎಲ್ಲಿಂದ, ಏನು ಯಾವ ಕಾರ್ಯನಿಮಿತ್ತ ಬಂದಿದ್ದೀರಿ?' ಎಂದು ವಿಚಾರಿಸಿದರು. ಇವರಲ್ಲಿ ಎಲ್ಲವನ್ನೂ ಹೇಳಿದೆ. ನನ್ನ ಉತ್ಸುಕತೆಯನ್ನು ನೋಡಿ ಇವರ ಉತ್ಸಾಹವು ಸ್ವಯಂ ಪಾಠ ಹೇಳುವ ತಂತ್ರಿಗಳಿಗಿಂತಲೂ ವಿಶೇಷವಾಗಿತ್ತು. ತೃಷಾಪರಿಹಾರಕ್ಕಾಗಿ ಅವರಿತ್ತ ಪಾನೀಯವನ್ನು ಸ್ವೀಕರಿಸಿದೆ. ಕೊಂಚ ಸಮಯದ ಅನಂತರ, "ಪಾಠದ ಬಗ್ಗೆ ನಿಮ್ಮನ್ನು ಕಾಣಲು ಬಂದಿದ್ದಾರೆ. ಬೇಗ ಪೂಜೆ ಮುಗಿಸಿ" ಎಂದು ತಂತ್ರಿಯವರ ಧರ್ಮಪತ್ನಿ ಪುನರಪಿ ಅವರನ್ನು ಜ್ಞಾಪಿಸಿದರು. ಇದರಿಂದ ನನಗೆ ಬಹಳಷ್ಟು ಮನಸ್ಸಿಗೆ ದೃಢವಾಯಿತು. ಕಲಿಯುವ ಆಸಕ್ತರಿಗಿಂತಲೂ ಕಲಿಸುವವರಲ್ಲಿ ವಿಶೇಷ ಆಸಕ್ತಿ ಇದೆ ಎಂಬುದು. ಇದಕ್ಕೆ ಪೂರಕವಾಗಿ ತಂತ್ರಿಯವರ ಧರ್ಮಪತ್ನಿಯ ಆಸಕ್ತಿಯು ಒಂದು ಮಾತನ್ನು ನೆನಪಿಸಿತು– "ಪತ್ನೀ ಮನೋ ಹಾರಿಣೀ". ಗೃಹಸ್ಥನ ಕೆಲವು ಲಕ್ಷಣಗಳಲ್ಲಿ ಇದೂ ಒಂದು ಅತಿ ಪ್ರಾಮುಖ್ಯವಾದ ಮಾತು ಮತ್ತು ಪ್ರಾಯೋಗಿಕವಾಗಿ ಇರಬೇಕಾದ ಗುಣ.

ಇಷ್ಟರಲ್ಲಿ ನಿತ್ಯಕರ್ಮಾದಿಗಳನ್ನು ಪೂರೈಸಿ, ತಂತ್ರಿಗಳ ಆಗಮನವಾಯಿತು. "ಪಲಿಮಾರು ಶ್ರೀಗಳ ಅಪ್ಪಣೆ ಯಂತೆ ಬಂದೆ, ಜ್ಯೋತಿಃಶಾಸ್ತ್ರದ ಆಳವಾದ ಅಧ್ಯಯನ ಬೇಕು" ಎಂದು ಯಾಚಿಸಿದೆ. ಏನೆಲ್ಲಾ ಜ್ಯೋತಿಃಶಾಸ್ತ್ರದ ಬಗ್ಗೆ ತಿಳಿದಿದೆ ಎಂದು ವಿನಯವಾಗಿ ಕೇಳಿದರು. "ಎಲ್ಲವನ್ನೂ ತಿಳಿಯಬೇಕೆಂಬ ಉತ್ಸಾಹವೊಂದನ್ನು ಬಿಟ್ಟು, ಏನೇನೂ ತಿಳಿದಿಲ್ಲ" ಎಂದೆ. "ವಿದ್ಯಾರ್ಥಿಗಳ ಮೂರು ವಿಭಾಗವನ್ನಾಗಿ ಮಾಡಿ ಮೂರು ಹೊತ್ತು ಪಾಠ ಹೇಳುತ್ತೇನೆ. ಇದರಲ್ಲಿ ಸರಿಹೊಂದುವ ವಿಭಾಗ ಮತ್ತು ಸಮಯವನ್ನು ಆರಿಸಿಕೊಳ್ಳಿ" ಎಂದರು. ಒಂದು ವಿಭಾಗದಲ್ಲಿ ಬಹಳ ವಿದ್ಯಾರ್ಥಿಗಳಿದ್ದರೂ ನಾನು ಆರಿಸಲ್ಪಟ್ಟ ವಿಭಾಗದ ಸಮಯಕ್ಕೆ ಬಹಳಷ್ಟು ಮಂದಿ (ಸುಮಾರು ೨೦ ವಿದ್ಯಾರ್ಥಿಗಳು) ಇದ್ದರು. ಇದು ನನಗೆ ಸರಿಹೊಂದಲಿಲ್ಲ. ಪುನಃ ಕೇಳಿಕೊಂಡೆ: "ನನಗೆ ಒಬ್ಬನಿಗೆ ಬೇರೆ ಪಾಠ ಮಾಡಬಹುದಾ?" ಎಂದು. "ಸಮಯಾಭಾವದ ಕಾರಣ ಈಗ ಇವರೊಟ್ಟಿಗೆ ಸೇರಿ, ಮತ್ತೆ ಸರಿಹೋಗುವುದು" ಎಂದರು.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥

ಎಂಬ ಗೀತೋಕ್ತಿಯಂತೆ, 'ಇನ್ನು ಒಂದು ತಿಂಗಳು ಬಂದು ನೋಡೋಣ. ಎಷ್ಟು ವಿದ್ಯಾರ್ಥಿಗಳು ಇರಬಹುದು' ಎಂದು ಮಾನಸಿಕವಾಗಿ ಸಮಾಧಾನ ಮಾಡಿಕೊಂಡೆ.

ತಾತ್ಕಾಲಿಕ ಸಮಾಧಾನಗೊಂಡ ನನಗೆ ಆಚಾರ್ಯಮಧ್ವರ ಸಂದೇಶವೊಂದು ನೆನಪಿಗೆ ಬಂತು:

ಉತ್ತಮಾದುತ್ತಮಾ ಸಿದ್ಧಿರ್ಧರ್ಮಮೋಕ್ಷಾದಿಷು ಸ್ಫುಟಾ ।
ತಸ್ಮಾದುತ್ತಮ ಆಚಾರ್ಯೇ ಲಬ್ಧೇ ನಾತೋಽವರಂ ವ್ರಜೇತ್ ॥

ಈ ಸಂದೇಶದ ಸ್ಫೂರ್ತಿಯಿಂದ ಇನ್ನಷ್ಟು ದೃಢಗೊಂಡು 'ಗೃಹ್ಣೀಯಾತ್ ತಿಂತ್ರಿಣೀಶಾಖಾಮ್' ಎಂಬಂತೆ ಇವರೇ ಜ್ಯೋತಿಃಶಾಸ್ತ್ರಪಾಠವನ್ನು ಹೇಳಲು ಯೋಗ್ಯ ಗುರುಗಳು ಎಂದೆನಿಸಿತು. ದೃಢಸಂಕಲ್ಪನಾಗಿ ಪಾಠಕೇಳಲು ಪ್ರಾರಂಭಿಸಿದೆ. ಅದಾದ ಅನಂತರ, ಒಂದೆರಡು ತಿಂಗಳಲ್ಲಿ ೨೦ ವಿದ್ಯಾರ್ಥಿಗಳಿದ್ದ ನಮ್ಮ ವಿಭಾಗವು ಕ್ಷೀಣಚಂದ್ರನಂತೆ ಕ್ಷೀಣಿಸುತ್ತಾ ಮೂರು ವಿದ್ಯಾರ್ಥಿಗಳ ಗುಂಪಾಗಿ ವಿಭಕ್ತವಾಯಿತು. ಇದಕ್ಕೆ ಕಾರಣವೇನೆಂದರೆ, ಗುರುಗಳ ಪಾಠದ ಶೈಲಿ. ಶಾಸ್ತ್ರೀಯ ವಿಶ್ಲೇಷಣೆ, ಇತರ ಶಾಸ್ತ್ರಗಳ ಸಂವಾದ, ಆಯಾ ಶ್ಲೋಕಗಳಲ್ಲಿ ವಿಶೇಷವಾಗಿ ಇರತಕ್ಕ ಅರ್ಥ, ಗಣಿತ, ವಿಶೇಷವಾಗಿ ಬೃಹಜ್ಜಾತಕದ ಒಂದನೇ ಶ್ಲೋಕಾರ್ಥದಲ್ಲಿಯೇ ೨೮ ನಕ್ಷತ್ರಗಳ ಪರಿಚಯ, ೭ ಗ್ರಹಗಳ ಪರಿಚಯ, ೩೬೦°, ಗ್ರಹರ ಸ್ಫುಟ (ಪಂಚಾಂಗರೀತಿ ಮತ್ತು Lahiri ಪ್ರಕಾರ) ಇತ್ಯಾದಿಗಳು ಗುರುಗಳ ಪಾಠದ ವೈಶಿಷ್ಟ್ಯ. ಇದರಲ್ಲಿ ಹಾಸ್ಯಪ್ರಸಂಗಗಳು ಬಹಳಷ್ಟು ನಡೆದವು. ಅವುಗಳಲ್ಲಿ ಒಂದು ಮಾತ್ರ ನೆನಪಿಸುತ್ತೇನೆ.

ನಮ್ಮ ವಿಭಾಗದ ೨೦ ವಿದ್ಯಾರ್ಥಿಗಳಲ್ಲಿ ಬಹಳ ಮಂದಿ, "ಅರ್ಥಾರ್ಜನೇ ಸಹಾಯಃ ಆಪದರ್ಣವೇ ಪೋತಃ ಯಾತ್ರಾ ಸಮಯೇ ಮಂತ್ರೀ ಜಾತಕಮ್ ಅಪಹಾಯ ನಾಸ್ತ್ಯಪರಃ ।" ಎಂಬ ಕಲ್ಯಾಣವರ್ಮರ ಅಭಿಪ್ರಾಯದಂತೆ, ಇದರ 'ಅರ್ಥಾರ್ಜನೇ ಸಹಾಯಃ' ಶಬ್ದವನ್ನು (ಜೀವನದ ಪರಿಸ್ಥಿತಿಯ ಒತ್ತಡದಿಂದಲೋ ಅಥವಾ ವಿಶೇಷವಾದ ಆರ್ಥಿಕ ಆಸಕ್ತಿಯಿಂದಲೋ ತಿಳಿಯದು) ಉದ್ದೇಶವಾಗಿ ಇಟ್ಟುಕೊಂಡು ಗಣಿತವಿಭಾಗ ಪಾಠ ಮಾಡುವಾಗ, ನಮಗೆ ಫಲಭಾಗ ಮಾತ್ರ ಸಾಕು ಗಣಿತಭಾಗ ಬೇಡ, ಗಣಿತವನ್ನು ಕಲಿತು ಏನು ಮಾಡುವುದು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೂ ಗುರುಗಳ ನಿಲುವು ಕ್ರಮಬದ್ಧವಾಗಿರುವ ಕಾರಣ ಗಣಿತಪ್ರಕ್ರಿಯೆಯನ್ನು ಮುಂದುವರಿಸಿದರು. ಆದರೂ ಫಲಭಾಗ ಮಾತ್ರ ಅಪೇಕ್ಷೆಯುಳ್ಳ ವಿದ್ಯಾರ್ಥಿಗಳು ನಿದ್ರಾರ್ಥಿಗಳಾಗಿ, ಆರಾಮವಿರಾಮವನ್ನು ಮಾಡುತ್ತಾ ನಾಸಿಕೋದ್ವರ್ತನ ಕರ್ಣೋದ್ವರ್ತನಾದಿಗಳನ್ನು ಮಾಡುತ್ತಾ ವೃಥಾ ಕಾಲಹರಣ ಮಾಡುವ ಸಂದರ್ಭದಲ್ಲಿ ಗುರುಗಳು ತಡೆಯಲಾಗದೆ, "ಗ್ರಹಗಣಿತ ಕಲಿಯದೆ ಗ್ರಹಗಳ ಫಲವನ್ನು ತಿಳಿಯಲು ಸಾಧ್ಯವಿಲ್ಲ" ಎಂದು ಘೋಷಿಸಿಬಿಟ್ಟರು. ಇದನ್ನು ಕೇಳಿದ ಫಲಭಾಗದಲ್ಲಿ ಮಾತ್ರ ಆಸಕ್ತರಾದ ವಿದ್ಯಾರ್ಥಿಗಳು ಇನ್ನು ನಾಳೆ ಬರುತ್ತೇವೆ ಎಂದು ತಮ್ಮ ಜ್ಯೋತಿಶ್ಶಾಸ್ತ್ರಪಾಠಕ್ಕೆ ವಿದಾಯವನ್ನು ಹೇಳಿ ಹೋದರು. ಆಗ, ಪ್ರಾರಂಭದಲ್ಲಿ ಗುರುಗಳು ಹೇಳಿದ ಮಾತು ನೆನಪಿಗೆ ಬಂತು: "ನೀನು ಈಗ ಇದರಲ್ಲಿಯೇ (ಈ ವಿಭಾಗದಲ್ಲಿಯೇ) ಇರು, ಕ್ರಮೇಣ ಸರಿಬರುವುದು". ಇದರಿಂದ ಗುರುಗಳ ಪ್ರತಿಯೊಂದು ಮಾತೂ ಪ್ರಾಗಲ್ಭ್ಯವನ್ನು ಹೊಂದಿದೆ ಎಂಬುದು ಮನದಟ್ಟಾಯಿತು.

ಈ ರೀತಿಯಾಗಿ ಬೃಹಜ್ಜಾತಕದ ಪಾಠವು ಸಾಮಾನ್ಯವಾಗಿ ೨ ವರ್ಷಗಳ ಅನಂತರ ಸಂಪೂರ್ಣಗೊಂಡಿತು. ಇದಕ್ಕೆ ಪೂರಕ ಮತ್ತು ಸಂವಾದಿಯಾಗಿ ಫಲದೀಪಿಕಾ, ಸಾರಾವಲೀ, ಜಾತಕಪಾರಿಜಾತ, ಚಮತ್ಕಾರ ಚಿಂತಾಮಣಿ, ಜಾತಕಾದೇಶಮಾರ್ಗ ಇತ್ಯಾದಿ ಗ್ರಂಥಗಳ ಆಯ್ದ ಶ್ಲೋಕಗಳ ಅವಲೋಕನವೂ ಮುಗಿಯಿತು. ಗುರುಗಳ ಇನ್ನೊಂದು ವೈಶಿಷ್ಟ್ಯವೆಂದರೆ, 'ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ' ಎಂಬಂತೆ ಶಾಸ್ತ್ರಕ್ಕೆ ಸಂಬಂಧಪಟ್ಟ ಯಾವುದೇ ವಿಶೇಷ ವಿಷಯವನ್ನು ಬಹು ಆದರದಿಂದ ಸ್ವೀಕರಿಸುವ ಗುಣ. ಅದು ಮಾತ್ರವಲ್ಲದೆ, ತತ್ತತ್‌ಕಾಲೀಯಸಂಪ್ರದಾಯ, ತತ್ತತ್‌ಸ್ಥಳೀಯ ಸಂಪ್ರದಾಯ, ಶಾಸ್ತ್ರವನ್ನು ಮೀರದೆ, ಶಾಸ್ತ್ರಕ್ಕೆ ಅಪಚಾರ ಮಾಡದೆ ಪೃಚ್ಛಕಸಂಬಂಧಿಗಳಾದ ಜನರಿಗೆ ಮನನೋಯಿಸದೆ "ಅನರ್ಥಾಪಾದಕಂ ಕರ್ಮ ಜ್ಞಾತಮಪಿ ನ ಪ್ರಕಾಶಯೇತ್",

'ಮಹತ್ ಕಷ್ಟಂ ನ ವಕ್ತವ್ಯಂ ಕಿಂಚಿತ್ ಕಷ್ಟಮುದೀರಯೇತ್' ಎಂಬ ಆಶಯವನ್ನು ಹೊಂದಿದ ದೈವಜ್ಞರೆಂದರೆ ನಮ್ಮ ಗುರುಗಳೇ ಸರಿ. ಇಂತಹ ಪರಮಸಾತ್ತ್ವಿಕಗುಣಿಯಾದ ದೈವಜ್ಞರನ್ನಾಗಿ ಬೇರೆ ಯಾರನ್ನೂ ನಾನು ಕಂಡಿಲ್ಲ.

ಒಮ್ಮೆ ಸಾಂದರ್ಭಿಕವಾಗಿ ಕೇರಳದ ಖ್ಯಾತ ದೈವಜ್ಞರಾದ ಶ್ರೀಮಾನ್ ನಾರಾಯಣ ಪುದುವಾಳ್ ನಮ್ಮ ಮನೆಗೆ ಬಂದರು. ನನ್ನ ವಿದ್ಯಾಭ್ಯಾಸದ ಬಗ್ಗೆ ಕೇಳಿ, ಗುರುಗಳನ್ನು ತುಂಬುಹೃದಯದಿಂದ, ಅವರ ಮಾತೃಭಾಷೆಯಲ್ಲಿ, 'ಆಯಾಳ್ ಸಾಗರ ಅಲ್ಲೆ' (ಅವರು ಸಾಗರ ಅಲ್ಲವೇ) ಎಂದುಬಿಟ್ಟರು. ಯಾಕೆಂದರೆ, "ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್". ತಿಳಿದವರೇ ತಿಳಿದವರನ್ನು ತಿಳಿದರೆ ಅವರ ಯೋಗ್ಯತೆಗೆ ಒಂದು ತುರಾಯಿ. ಅವರ ಮಾತನ್ನು ಕೇಳಿ ಇಂತಹವರ ಶಿಷ್ಯ ನಾನು ಎಂದು ನನಗೊಂದು ವಿಶೇಷ ತುರಾಯಿ.

ಈ ರೀತಿಯಾಗಿ ಪ್ರಶ್ನಶಾಸ್ತ್ರದ ಅಧ್ಯಯನವೂ ಮುಂದುವರಿಯಿತು. ಅದಕ್ಕೆ ಪೂರಕವಾಗಿ ಕೃಷ್ಣೀಯ ಶಾಸ್ತ್ರ, ದೇವಪ್ರಶ್ನ, ಅನುಷ್ಠಾನಪದ್ಧತಿಯ ಆಯ್ದ ಶ್ಲೋಕಗಳು ಇತ್ಯಾದಿಯಾಗಿ ಮುಹೂರ್ತದೀಪಿಕಾ, ಮಾಧವೀಯ ಗ್ರಂಥಗಳ ಅಧ್ಯಯನದಿಂದ ಪ್ರಶ್ನವಿಭಾಗವೂ ಮುಹೂರ್ತವಿಭಾಗವೂ ಸಮಾಪ್ತವಾಯಿತು. ತದನಂತರ, ಕರ್ಮವಿಪಾಕಗ್ರಂಥಗಳ ಅಧ್ಯಯನ, ಈ ಕರ್ಮವಿಪಾಕಗ್ರಂಥಗಳ ಪಾಠಗಳಲ್ಲಿ ವಿಶೇಷ ಆಸಕ್ತಿಯಿಂದ ಮಾಂಧಾತೃ ಋಷಿನಿರ್ಮಿತ ಕರ್ಮವಿಪಾಕಗ್ರಂಥವನ್ನು ಪ್ರಾಯಶಃ ಮೊದಲಿಗೆ ನಮ್ಮನ್ನು ಬಿಟ್ಟು ಯಾರಿಗೂ ಹೇಳಲಿಲ್ಲ ಎಂಬ ವಿಚಾರವನ್ನು ಹೇಳಿದರು. ಇದಕ್ಕೆ ಪೂರಕವಾಗಿ ಇನ್ನಿತರ ಕರ್ಮವಿಪಾಕಗ್ರಂಥಗಳನ್ನೂ ಅವಲೋಕನ ಮಾಡಿ ಪಾಠ ಹೇಳಿದ್ದಾಗಿದೆ. ಇದು ಅತ್ಯಂತ ಪ್ರಾಮುಖ್ಯವಾದ ವಿಷಯ. ಯಾವ ಜ್ಯೋತಿಷಿಯೂ ಇದರ ಗೋಜಿಗೆ ಹೋಗುವುದಿಲ್ಲ. ಈ ಕರ್ಮಸಿದ್ಧಾಂತವೇ ಜ್ಯೋತಿಃಶಾಸ್ತ್ರದ ತಳಹದಿಯ ಗುಟ್ಟು. ಧರ್ಮಬೋಧಕ ಹಾಗೂ ಕರ್ಮವಿಪಾಕಗ್ರಂಥಗಳನ್ನು ತಿಳಿಯದಿದ್ದಲ್ಲಿ ಜ್ಯೋತಿಃಶಾಸ್ತ್ರದ ಫಲಬೋಧನೆಗೆ ಅಪೂರ್ಣತೆ ಬರುವುದು.

ವಿಪಶ್ಚಿದಾವಿಪ್ರಸಭಾಸು ಕುರ್ಯಾದ್ವಿಚಾರಣಾಂ ಜ್ಯೌತಿಷಶಾಸ್ತ್ರವರ್ತ್ಮನಾ ।
ಶ್ರುತಿಸ್ಮೃತಿನ್ಯಾಯಪರೈಃ ಸದುಕ್ತಿಭಿಸ್ತನ್ನಿಷ್ಕ್ರಿಯಾಂ ಪುಷ್ಕಲತಾ ಯಥೈವ ॥

ಎಂಬುದನ್ನು ಮನಗಂಡ ಗುರುಗಳು ಕರ್ಮವಿಪಾಕಗ್ರಂಥಗಳನ್ನು ಬಹು ಆಸಕ್ತರಾಗಿ ಅಧ್ಯಯನ ಮಾಡಿಸಿದರು. ಪ್ರಾಯಶಃ ದೈವಜ್ಞರ ಲಕ್ಷಣಗಳು ಇವರಲ್ಲಿ ತೋರಿಬರುವಷ್ಟು ಇನ್ನು ಯಾರಲ್ಲೂ ಕಾಣಲಿಲ್ಲ.

• "ತತ್ರ ಗುಣಾಃ ಶುಚಿರ್ದಕ್ಷಃ ಪ್ರಗಲ್ಭೋ ವಾಗ್ಮೀ ಪ್ರತಿಭಾನವಾನ್ ದೇಶಕಾಲವಿತ್ ಸಾತ್ತ್ವಿಕೋ ನ ಪರಿಷದ್ಭೀರುಃ ಸಹಾಧ್ಯಾಯಿಭಿಃ ಅನಭಿಭವನೀಯಃ ಕುಶಲೋಽವ್ಯಸನೀ ಶಾಂತಿಕಪೌಷ್ಟಿಕಾಭಿಚಾರಸ್ನಾನ ವಿದ್ಯಾಭಿಜ್ಞೋ ವಿಬುಧಾರ್ಚನವ್ರತೋಪವಾಸನಿರತಃ ಸ್ವತಂತ್ರಾಶ್ಚರ್ಯೋತ್ಪಾದಿತಜ್ಞಾನಪ್ರಭಾವಃ ಪೃಷ್ಟಾಭಿಧಾಯೀ ಅನ್ಯತ್ರ ದೈವಾತ್ಯಯಾತ್ ಗ್ರಹಗಣಿತಹೋರಾಸಂಹಿತಾಗ್ರಂಥಾರ್ಥವೇತ್ತಾ"

ಈ ರೀತಿ ಜ್ಯೋತಿಃಶಾಸ್ತ್ರದ ಶಾಸ್ತ್ರೀಯ ಪರಂಪರೆಗೆ ಒಂದು ವಿಶಿಷ್ಟ ಕೊಡುಗೆಯನ್ನಿತ್ತ ಅಸಾಧಾರಣ ವ್ಯಕ್ತಿತ್ವ ಇವರದ್ದು. ಇಂದಿಗೆ ದೇಶವಿದೇಶಗಳಲ್ಲಿ ನಮ್ಮ ಕಾರ್ಯಪ್ರವೃತ್ತಿಗೆ ಹಾಗೂ ಕೀರ್ತಿಗೆ, ನಮ್ಮ ವಿಶೇಷ ಅಧ್ಯಯನ ಮುಂದುವರಿಕೆಗೂ ಕಾರಣೀಭೂತರಾದ, ಸಮಾಜ ನಮ್ಮನ್ನು ಉತ್ತಮ ದೈವಜ್ಞರನ್ನಾಗಿ ಗುರುತಿಸುವುದಕ್ಕೂ ಮೂಲ ಕಾರಣರಾದ ನಮ್ಮ ನೆಚ್ಚಿನ ಗುರುಗಳಾದ, "ಗುರುಭ್ಯಶ್ಚ ಗ್ರಹೇಭ್ಯಶ್ಚ ಮಯಾ ದತ್ತೋಽಯಮಂಜಲಿಃ ।" ಎನ್ನುವಾಗ ತತ್‌ಕ್ಷಣ ಸ್ಮರಣೀಯರಾಗುವ ಶ್ರೀಮಾನ್ ಅನಂತಪದ್ಮನಾಭ ತಂತ್ರಿಗಳಿಗೆ ನಾವು ಕೊಡುವುದಾದರೂ ಏನು? ಏನನ್ನು ಕೊಡಬಲ್ಲೆವು?

ಅಂತರ್ಗತ ಪರಮಾತ್ಮನಿಗೆ ಇಷ್ಟೇ ಕೊಡಬಲ್ಲೆವು; ಅದೇ–

"ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ"

* * *

# ಗುರುವರಸಹಯೋಗಾನುಭೂತಿ

● ಬಿ. ನಾರಾಯಣ ರಂಗಾಭಟ್ಟ
ಜ್ಯೋತಿಷ್ಕರು, 'ಶ್ರೀಪಾಂಚಜನ್ಯ', ಮಧೂರು.

ಧರ್ಮವು ತನ್ನ ಮೂರೂ ಪಾದಗಳನ್ನು ಕಳೆದುಕೊಂಡು ಒಂದೇ ಪಾದದಲ್ಲಿ ನಿಂತಿರುವ ಈ ಕಲಿಯುಗದ ಮಾಹಾತ್ಮ್ಯಾನುಗುಣವಾಗಿ ಲೌಕಿಕ ಜೀವನದ ಭೋಗಲಾಲಸೆಯಲ್ಲಿ ಮುಳುಗಿ ಉಳಿದೆಲ್ಲವನ್ನೂ ಮರೆಯಬೇಕಾಗಿ ಬರುವುದು ಸ್ವಾಭಾವಿಕ. ಈ ಪರಿಸ್ಥಿತಿಯಲ್ಲೂ ಧರ್ಮಮಾರ್ಗಾವಲಂಬಿಯಾಗಿ, ಆಧ್ಯಾತ್ಮಿಕ ಜೀವನಮಾರ್ಗವನ್ನು ಅನುಸರಿಸುವುದು ಕಷ್ಟ ಸಾಧ್ಯ. ಸ್ವಕುಲವಿಹಿತಾಚಾರ ಮತ್ತು ಧರ್ಮದಲ್ಲಿ ನೆಲೆನಿಂತು ಇತರರನ್ನೂ ಸನ್ಮಾರ್ಗ ಚರರನ್ನಾಗಿಸುವ ಪ್ರಯತ್ನಶೀಲರ ಸಂಖ್ಯೆ ವಿರಳ. ಈ ಕಾಲಘಟ್ಟದಲ್ಲೂ ಗುರುಗಳಾದ ಶ್ರೀ ಅನಂತಪದ್ಮನಾಭ ತಂತ್ರಿಗಳನ್ನು ನೋಡಿದಾಗ ಇಂತಹ ವ್ಯಕ್ತಿತ್ವಸಂಪನ್ನರೂ ಇರಲು ಸಾಧ್ಯವೇ ಎಂದು ಆಶ್ಚರ್ಯಚಕಿತರಾಗಿ ಪ್ರಶ್ನಿಸಬೇಕಾದ ಪ್ರಮೇಯ ಎದುರಾದೀತು.

ಬೃಹತ್ಸಂಹಿತೆಯಲ್ಲಿ ಹೇಳಿದ ಸರ್ವಲಕ್ಷಣಗಳನ್ನೂ ಹೊಂದಿ ಅನ್ವರ್ಥವಾಗಿಯೂ ಸಾಂವತ್ಸರಿಕನಾಗುವುದು ಅಸಾಧ್ಯ. ಆದರೆ ಗ್ರಂಥೋಕ್ತವಾದ ಬಹುತೇಕಲಕ್ಷಣಗಳು ಮೇಳೈಸಿರುವ ಗುರುಗಳನ್ನು ಅತಿ ಸನಿಹದಿಂದ ಪರಿಚಯಿಸಿಕೊಂಡಾಗ ವರಾಹಮಿಹಿರರ ಉಕ್ತಿಗಳಿಗೆ ಮೂರ್ತಿಕಲ್ಪನೆ ಸುಲಭಸಾಧ್ಯ.

ಯಥಾಕಾಲಪ್ರತಿಭಾನತ್ವ, ಸತ್ಯತ್ವ, ಶ್ರೋತೃಮನೋಹರತ್ವಾದಿಗುಣಪರಿಪೂರ್ಣವಾದ ಶುದ್ಧವಾದ ಸಿದ್ಧವಚನ ಗಳಿಂದ ಗುರುಗಳ ಫಲಪ್ರವಚನರೀತಿ ಅನ್ಯಾದೃಶ. ಅಧಿಕವೆನಿಸುವ ವಿವರಣೆಗಳಿಲ್ಲದೆ ಕಾರ್ಯಮಾತ್ರಪ್ರಸಕ್ತಿಯಲ್ಲಿ ಅನ್ವಯಾನುಸಾರ ಶ್ಲೋಕವನ್ನುಲ್ಲೇಖಿಸಿ ಕೇಳುಗರ ಮನಂಬುಗುವಂತೆ ಸ್ಪಷ್ಟವಾಗಿ ಫಲನಿರೂಪಿಸುವುದು ಗುರುಗಳ ಶೈಲಿ.

"ನನ್ನಂಥಾ ಗುರವಸ್ಸಂತಿ ಭೂಲೋಕೇ ಪತ್ತುಸಾವಿರ" ಎಂದು ತನ್ನನ್ನು ತಾನು ವಾಮನಕನನ್ನಾಗಿಸಿಕೊಂಡು ಹೇಳುವ ಗುರುಗಳ ವಿನಯದ ವಿನೋದೋಕ್ತಿ ಇತರರನ್ನು ಮುಜುಗರಕ್ಕೊಳಪಡಿಸುತ್ತದೆ. ವಯೋಜ್ಞಾನಗಳ ವಾರ್ಧಕ್ಯಾವಸ್ಥೆಯಲ್ಲಿಯೂ ಕೂಡ ಹೊಸಹೊಸ ವಿಷಯಗಳನ್ನಾಗಲಿ ಶ್ಲೋಕಗಳನ್ನಾಗಲಿ ಯಾರಾದರೂ ಹೇಳಿದಲ್ಲಿ ಅದನ್ನು ಕೂಡಲೇ ಬರೆದು ಕೊಳ್ಳುವುದಲ್ಲದೆ ಅದರ ಅರ್ಥವನ್ನೂ ಕೂಡ ಕೇಳಿ ಮನನ ಮಾಡಿಕೊಳ್ಳುವುದನ್ನು ನೋಡಿದರೆ ವಿದ್ಯಾರ್ಥಿಗಳೂ ಕೂಡ ನಾಚಿಕೆಪಡಬೇಕು. ಇದು ಅವರ ಜ್ಞಾನತೃಷೆ ಹಾಗೂ ವಿನಯಗಳಿಗೆ ನಿದರ್ಶನ.

ಶಾಸ್ತ್ರದಲ್ಲಿ ಅವರಿಗಿರುವ ನಿಷ್ಠೆ ಹಾಗೂ ಗೌರವಗಳಿಂದಾಗಿ ಎಂತಹ ವಿದ್ವಾಂಸರೂ ಕೂಡ ಇವರತ್ತ ಆಕೃಷ್ಟರಾಗುತ್ತಾರೆ. ಉದಾಹರಣೆಗೆ, ಜ್ಯೌತಿಷಕ್ಕೆ ಮೂಲಾಧಾರವಾದ ಗಣಿತದ ವಿಷಯದಲ್ಲಿ ಅವರಿಗಿರುವ ಶ್ರದ್ಧೆಯನ್ನು ಗಮನಿಸಿದರೆ ಅರ್ಥವಾಗುವುದು.

**ಯದಾ ಯಶ್ಚೈವ ಸಿದ್ಧಾಂತೋ ಗಣಿತೇ ದೃಕ್ಸಮೋ ಭವೇತ್ ।**
**ತದಾ ತೇನೈವ ಸಂಸಾಧ್ಯಂ ಜಾತಕಂ ಗಣಯೇದ್ಬುಧಃ ॥**

ಎಂಬ ದೃಕ್ಸಿದ್ಧಾಂತದ ಪ್ರಾಧಾನ್ಯವನ್ನು ಅಂಗೀಕರಿಸಿ ಅಚಲವಿಶ್ವಾಸದಿಂದ ಆಚರಣೆಗೆ ತಂದವರು ಗುರುಗಳು ಮಾತ್ರ ಎಂದರೆ ಅತಿಶಯೋಕ್ತಿಯಲ್ಲ.

ಯಾಕೆಂದರೆ, ಬಹುಶಃ ಎಲ್ಲಾ ಜ್ಯೌತಿಷಿಕರೂ ಪ್ರಾಚೀನ ದೃಗ್ಗಣಿತದ ಆದ್ಯವಾಕ್ಯವಾದ "ಗೀರ್ನಃಶ್ರೇಯಃ" ಎಂಬುದನ್ನೇ ನಿತ್ಯಪಂಚಾಂಗವೀಕ್ಷಣಾದಿಕಾಲದಲ್ಲಿ ಇಡುವುದನ್ನು ರೂಢಿಸಿಕೊಂಡಿದ್ದರೂ ಕೂಡ ಗುರುಗಳು ಮಾತ್ರ

ಈಗಿನ ಕಾಲಾನುಸೃತ ಸಂಸ್ಕಾರಕ್ಕೊಳಪಟ್ಟ ನೂತನ ದೃಗ್ಗಣಿತವಾಕ್ಯವಾದ "ಕೃಷ್ಣಃ ಪಾಯಾತ್" ಎಂಬುದನ್ನೇ ಪ್ರಮಾಣವಾಗಿಸಿಕೊಂಡಿದ್ದಾರೆ.

ಪ್ರಷ್ಟಾ ಸ್ವರ್ಣೇನ ಯಂ ರಾಶಿಂ ಸ್ಪೃಶೇದಾರೂಢ ಏವ ಸಃ ॥

ಎಂಬ ಶಾಸ್ತ್ರೀಯ ಮಾರ್ಗವನ್ನನುಸರಿಸಿ ಪೂಜಾಪುರಸ್ಸರ ಸ್ವರ್ಣನಿಕ್ಷೇಪಿಸಿಯೇ ಪ್ರಶ್ನಕರ್ಮವನ್ನು ನಿರ್ವಹಿಸುವುದೂ ಕೂಡ ಗುರುಗಳಿಗಿರುವ ಶಾಸ್ತ್ರಗೌರವದ ಪ್ರತೀಕ.

ಭಗವದ್ಗೀತೆಯ ಶ್ಲೋಕಗಳಿಗೆ ಜ್ಯೌತಿಷಪರಾರ್ಥ ಕಲ್ಪನೆಯು ಗುರುಗಳ ಮೇಧಾವಿತ್ವಕ್ಕೆ ಸಾಕ್ಷ್ಯವನ್ನು ಹೇಳುತ್ತದೆ.

ಯಃ ಶಾಸ್ತ್ರವಿಧಿಮುತ್ಸೃಜ್ಯ................ ॥
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥

ಎಂಬ ಶ್ಲೋಕಗಳಲ್ಲಿರುವ 'ಶಾಸ್ತ್ರ' ಶಬ್ದಕ್ಕೆ ಸಂಖ್ಯಾಶಾಸ್ತ್ರಪ್ರಕಾರ ಶಾ=೫, ಸ್ತ್ರ=೨ (೫+೨=೭). ಈ ಏಳರಿಂದ ಸೂಚಿತವಾದದ್ದು ಸಪ್ತಗ್ರಹಾಧಾರವಾದ ಜ್ಯೌತಿಷಶಾಸ್ತ್ರ. ಆದ್ದರಿಂದ ಕಾರ್ಯಾಕಾರ್ಯವ್ಯವಸ್ಥಿತಿಗೆ ಭಗವಂತನು ವಿಧಿಸಿದ ಶಾಸ್ತ್ರ ಜ್ಯೌತಿಷ ಮಾತ್ರ. ಜ್ಯೌತಿಷೇತರ ಶಾಸ್ತ್ರಗಳಿಂದ ನಿರ್ಣಯಿಸಿದಲ್ಲಿ ಸಿದ್ಧಿಯನ್ನೂ ಪರಗತಿ (ಶ್ರೇಷ್ಠಪರಿಹಾರ)ಯನ್ನೂ ಹೊಂದುವುದು ಅಸಾಧ್ಯವೆಂಬುದು ಅನನ್ಯಲಬ್ಧವಾದ ಗುರುಗಳ ಗೀತಾವ್ಯಾಖ್ಯಾನ.

ಗುರುಗಳ ಕ್ರಿಯಾಶೀಲತೆಯು ಅಂತೇವಾಸಿಗಳಿಗೂ ಯುವಕರಿಗೂ ಆದರ್ಶಪ್ರಾಯವಾದದ್ದು. ಅವರು ಮಾಡುವ ಕೆಲಸಗಳು ಯಾವುದೇ ಇರಲಿ ಅದು ಸಸೂತ್ರವಾದ ಪದ್ಧತಿಯಲ್ಲಿಯೇ ಹೊರತು ಒಟ್ಟಾರೆ ಮಾಡಿ ಮುಗಿಸುವ ಜಾಯಮಾನವೇ ಇವರದಲ್ಲ. ಪ್ರಶ್ನೆಗೆ ಹೋಗುವ ಮುನ್ನಾ ದಿನವೇ ಮರುದಿವಸದ ಸ್ಫುಟ, ಗ್ರಹಗತಿ-ಸ್ಥಿತ್ಯಾದಿಗಳನ್ನು ಬರೆದುಕೊಂಡು ಹೋಗಿ ಪ್ರಶ್ನಾರಂಭದಲ್ಲಿ ತಾತ್ಕಾಲಿಕೀಕರಿಸುವುದು ಅವರ ಪದ್ಧತಿ.

ಇದು ತನಕ ಭಾಗವಹಿಸಿದ ಎಲ್ಲ ಪ್ರಶ್ನೆಗಳ ಗ್ರಹಸ್ಥಿತಿ-ಸ್ಫುಟಾದಿಗಳು ಹಾಗೂ ಪ್ರಧಾನವಿಷಯಗಳೂ ಕೂಡ ಗುರುಗಳ ಸಂಗ್ರಹದಲ್ಲಿವೆ ಎಂಬುದು ಗಮನಾರ್ಹವಿಚಾರ.

ಪ್ರಶ್ನಸದಸ್ಸಿನಲ್ಲಿ ಗುರುಗಳ ಉಪಸ್ಥಿತಿಯು ಸಾಕ್ಷಾತ್ ದಕ್ಷಿಣಾಮೂರ್ತಿಯ ಸಾನ್ನಿಧ್ಯದ ಅನುಭೂತಿಯನ್ನೊದಗಿಸುತ್ತದೆ.

ಚಿತ್ರಂ ವಟತರೋರ್ಮೂಲೇ ವೃದ್ಧಾಃ ಶಿಷ್ಯಾ ಗುರುರ್ಯುವಾ ।
ಗುರೋಸ್ತು ಮೌನಂ ವ್ಯಾಖ್ಯಾನಂ.................................... ॥

ಎಂಬುದು ಅಕ್ಷರಾರ್ಥದಲ್ಲಿಯೂ ಗುರುಗಳ ಸಾನ್ನಿಧ್ಯದಲ್ಲಿ ಸತ್ಯವೆನಿಸುತ್ತದೆ. ಅವರೊಂದಿಗೆ ಕುಳಿತು ಪ್ರಶ್ನೆ ವಿಮರ್ಶೆ ಮಾಡುವ ಸಂದರ್ಭದಲ್ಲಿ ಅನ್ಯಾದೃಶವಾದ ಧೈರ್ಯೋತ್ಸಾಹವಿಶ್ವಾಸಗಳು ಪುಟಿದೇಳುತ್ತವೆ. ಈ ಅನುಭವವು ಮಹಾಕ್ಷೇತ್ರಗಳಾದ ಸಾಲಿಗ್ರಾಮ, ಬಪ್ಪನಾಡು, ಪುತ್ತಿಗೆ, ಪಡುಬಿದ್ರಿ, ಬ್ರಹ್ಮಸ್ಥಾನ, ಕೆಮ್ಮಣ್ಣು ಮೊದಲಾದವುಗಳಲ್ಲಿ ಸಿದ್ಧಗೊಂಡಿದೆ. ಯಾವ ವಿಷಯವನ್ನೇ ಹೇಳಲಿ ಅದಕ್ಕೆ ಪ್ರಮಾಣಗಳು ಗುರುಗಳಲ್ಲಿವೆ. ಆದ್ದರಿಂದ ಕೆಲವೊಮ್ಮೆ ನಮ್ಮ ಅಲ್ಪಜ್ಞಾನದಿಂದ ಏನಾದರೂ ಅಬದ್ಧಗಳು ಹೇಳಿಹೋದಲ್ಲಿ ಗುರುಗಳು ರಕ್ಷಿಸಿದ ಘಟನೆಗಳೂ ಇವೆ. ಉದಾಹರಣೆಗೆ- ಒಂದು ಮಹಾಕ್ಷೇತ್ರದ ಪ್ರಶ್ನೆಯ ಸಂದರ್ಭದಲ್ಲಿ ಮರಣವೆಂದರೆ ಸಾವು ಮಾತ್ರವಲ್ಲ ಎಂದು ಸಾಂದರ್ಭಿಕವಾಗಿ ನಾನು ಹೇಳಿದಾಗ-

ಮೃತಿರ್ಮೂರ್ಛಾ ಮದೋ ನಿದ್ರಾ ವಿಸ್ಮೃತಿರ್ಭ್ರಮಣಂ ತಥಾ ।
ಪಾಪಾಪಮಾನದುಃಖಾನಿ ಭಂಗೋ ಮೃತಿರಿತೀರಿತಃ ॥

ಎಂಬ ಶ್ಲೋಕವನ್ನುದ್ಧರಿಸಿ ದಶವಿಧಮರಣಗಳನ್ನು ಗುರುಗಳು ಸೂಚಿಸಿದಾಗ ಪ್ರಶ್ನಸದಸ್ಸು ಆಶ್ಚರ್ಯ ಚಕಿತವಾದದ್ದು ಸತ್ಯ.

"ಕಾಲಂ ನಿಯಮ್ಯ ಕಾರ್ಯಾಣಿ ಹ್ಯಾಚರೇನ್ನಾನ್ಯಥಾ ಕ್ವಚಿತ್ ॥"

ಅಕರ್ತವ್ಯಂ ನ ಕರ್ತವ್ಯಂ ಪ್ರಾಣೈಃ ಕಂಠಗತೈರಪಿ ।
ಕರ್ತವ್ಯಮೇವ ಕರ್ತವ್ಯಂ ಪ್ರಾಣೈಃ ಕಂಠಗತೈರಪಿ ॥

ಇವುಗಳು ಗುರುಗಳ ಉಪದೇಶದಿಂದ ಹಾಗೂ ಚರ್ಯೆಗಳಿಂದ ವೇದ್ಯವಾದ ತತ್ತ್ವಗಳು.

ಸೇವಿಸುವ ಆಹಾರದ ಸ್ವಭಾವವು ಮಾನುಷಶರೀರಕ್ಕೂ ಮನಸ್ಸಿಗೂ ಪರಿಣಾಮಕಾರಕ. ಆದ್ದರಿಂದ ಸಾತ್ತ್ವಿಕಾಹಾರಸೇವನೆಯು ಜೀವನನ್ನು ಸಾತ್ತ್ವಿಕನನ್ನಾಗಿಸುವುದಕ್ಕೆ ಸಹಕಾರಿ ಎಂಬುದನ್ನು ತಿಳಿದು ಆಚರಿಸುತ್ತಿರುವವರು ಗುರುಗಳು. ಪ್ರತಿನಿತ್ಯ ಹಾಲು ಮತ್ತು ಕದಲಿಬಾಳೆಹಣ್ಣುಗಳನ್ನು ಅನ್ನಕ್ಕೆ ಬೆರಸಿ ಭುಂಜಿಸುವುದು ಗುರುಗಳ ಕ್ರಮ. ಅತಿಯಾಗಿ ಯಾವ ರಸಪದಾರ್ಥಗಳನ್ನು ಅವರು ಸೇವಿಸಲಾರರು. ಈ ಪ್ರಕಾರವಾದ ಆಹಾರ ಸೇವನೆಯಿಂದ ಮಾತ್ರವೇ ಅವರಂತೆ ಪ್ರಿಯವಾಗಿ ಹಾಗೂ ಪರ್ಯೆರವಧ್ಯವಾಗಿ ಮಾತುಗಳನ್ನಾಡುವುದು ಸಾಧ್ಯವೆಂದು ತೋರುವುದು. ಗುರುಗಳಿಗೆ ಕೋಪ ಬಂದುದನ್ನು ನಾನು ಕಂಡಿಲ್ಲ. ನಿಜವಾಗಿಯೂ ಅವರು ಅಜಾತಶತ್ರುವೇ ಸರಿ.

ಗುರುಗಳು ಪರಿಹಾರ, ಪ್ರಾಯಶ್ಚಿತ್ತಾದಿಗಳನ್ನು ವಿಧಿಸುವ ಕ್ರಮವು ಎಲ್ಲ ಜ್ಯೌತಿಷಿಕರಿಗೂ ಅನುಕರಣೀಯ ಹಾಗೂ ಅನುಸರಣೀಯವೂ ಆದುದು. 'ರೋಗಿಯ ಮೇಲೆ ಕರುಣೆಯೇ ಹೊರತು ರೋಗದ ಮೇಲಲ್ಲ' ಎಂಬುದು ಅವರ ನಿಲುವು. ಆದ್ದರಿಂದ–

"ಪ್ರಾಯಶ್ಚಿತ್ತಂ ಚ ತತ್ತತ್ಕಥಿತಮಪಿ ಚಿಕಿತ್ಸಾಸ್ತು ರೋಗೋಪಶಾಂತ್ಯೈ ॥"

ಎಂಬಂತೆ ಪಾಪಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನೇ ವಿಧಿಸಬೇಕೆಂಬುದು ಅವರ ಆಶಯ. ಉದಾಹರಣೆಗೆ–ಗ್ರಹಚಾರಾದಿ ದೋಷಗಳಿಗೆ ಪ್ರತ್ಯೇಕಗ್ರಹೋಕ್ತ ಜಪಸಂಖ್ಯೆಯಷ್ಟು ಜಪ ಮಾಡಿ ತದ್ದಶಾಂಶಹೋಮ ಮಾಡಿಸಬೇಕು ಎಂದೇ ಅವರ ವಾದ. ಅಂತೆಯೇ ಕರ್ಮವಿಪಾಕಪ್ರಾಯಶ್ಚಿತ್ತಾದಿಗಳನ್ನು ವಿಧಿಸಲೂ ನಡೆಸಲೂ ಗುರುಗಳು ಅನುಭವವುಳ್ಳವರಾಗಿದ್ದಾರೆ. ವೈದಿಕಪರಿಹಾರಗಳನ್ನೇ ಸೂಚಿಸುವುದು ಇವರ ಮೇಲ್ಮೆ. ಪೈತೃಕದೋಷ, ಬಂಧನವಿಮುಕ್ತಿಗಾಗಿ ೯೩ ಆವರ್ತನ (ಬದ್ಧ = ೯೩) ವಿಷ್ಣುಸಹಸ್ರನಾಮಪಾರಾಯಣವನ್ನು ವಿಧಿಸುವುದೇ ಮೊದಲಾದವುಗಳು ಗುರುಗಳ ವೈಶಿಷ್ಟ್ಯ. ಈ ವಿಧವಾದ ಶಾಸ್ತ್ರೀಯ ಪರಿಹಾರ ಸೂಚಿಸುವುದರಿಂದಾಗಿ "ತಂತ್ರಿಗಳು ಪರಿಹಾರ ಕಂಡಾಬಟ್ಟೆ ಹೇಳುತ್ತಾರೆ" ಎಂದು ಕೆಲವು ಅಲ್ಪಜ್ಞರು ಇವರ ಬಗ್ಗೆ ಆಡುವುದಿದೆ. ಆದರೆ ಅದಕ್ಕೂ ಗುರುಗಳ ಉತ್ತರ ಬಹಳ ಮಾರ್ಮಿಕ. "ಹೌದು ಮಾರಾಯರೇ, ನಾನು ದಾಕ್ಷಿಣ್ಯಕ್ಕೆ ಕಮ್ಮಿ ಪರಿಹಾರ ಹೇಳಿದರೆ ಗ್ರಹಚಾರ ಹೋಗುತ್ತದಾ? ನಿಮ್ಮ ಗ್ರಹಚಾರ ಸರಿಯಾಗಬೇಕಿದ್ರೆ ಹೇಳಿದ ಹಾಗೆ ಮಾಡಿ."

ಹೀಗೆ ಅನವಧಿ ಆಚಾರ–ವಿಚಾರಗಳಿಗೆ ಆಕರವಾಗಿರುವ ಗುರುಗಳಾದ ಶ್ರೀ ಪದ್ಮನಾಭ ತಂತ್ರಿಗಳು ನನ್ನಂತಹವರಿಗೆ ತನ್ನ ಜೀವನಪದ್ಧತಿಯಿಂದ ತೋರಿಸಿಕೊಟ್ಟಿರುವ ಆದರ್ಶಗಳು ಹಲವು. ಯಥಾರ್ಥದಲ್ಲಿ "ಆಚಾರ್ಯ", "ಗುರು" ಹಾಗೂ "ದೈವಜ್ಞ" ಪದಗಳಿಗೆ ಸಾಕಾರಮೂರ್ತಿಯಾಗಿರುವ ಗುರುಗಳು ಸರ್ವಾದರಣೀಯರಾದದ್ದು ಸ್ವಾಭಾವಿಕ. ಅವರ ಸಹಯೋಗದಿಂದಾಗಿ ನಾನು ಕಲಿತ ಹಲವಾರು ವಿಷಯಗಳುನಿತ್ಯನೂತನ ಅನುಭವವನ್ನು ನೀಡುತ್ತದೆ. ಅವ್ಯಾಜ ಕರುಣಾಮೂರ್ತಿಯೂ ಯದೃಚ್ಛಾಲಾಭಸಂತುಷ್ಟರೂ ಬಾಹ್ಯಾಭ್ಯಂತರ ಶುದ್ಧರೂ ಆದ ಗುರುಗಳ ಪಾದಾರವಿಂದಗಳಿಗೆ "ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ।"

॥ ಶುಭಮ್ ॥

* * *

# ನಮ್ಮ ತೀರ್ಥರೂಪರು

● ಬೈಲೂರು ನಾರಾಯಣ ತಂತ್ರಿ
ಸಂಸ್ಕೃತ ಅಧ್ಯಾಪಕರು, ಕೆನರಾ ಹೈಸ್ಕೂಲು, ಮಂಗಳೂರು.

ಈ ಕಲಿಕಾಲದಲ್ಲಿ ಬ್ರಾಹ್ಮಣಧರ್ಮದಿಂದಲೇ ಜೀವನವನ್ನು ನಡೆಸಲು ಸಾಧ್ಯವಿಲ್ಲವೆಂದು ಬಹುಜನರು ನಿರ್ಧರಿಸಿದ್ದರೂ, ಅಲ್ಪಸಂಖ್ಯೆಯಲ್ಲಾದರೂ ಬ್ರಾಹ್ಮಣರು ಸ್ವಧರ್ಮದಿಂದ ಜೀವನವನ್ನು ನಡೆಸುವವರು ಇದ್ದೇ ಇರುತ್ತಾರೆ. ಅವರಲ್ಲಿ ನಮ್ಮ ತೀರ್ಥರೂಪರು ಅನ್ಯತಮರು.

ದಯೆ, ಅಹಿಂಸೆ, ಎಚ್ಚರತಪ್ಪದಿರುವುದು, ಅತಿಥಿಸತ್ಕಾರ, ಸತ್ಯನಿಷ್ಠೆ, ಅಕ್ರೋಧ, ಸ್ವಪತ್ನಿಯಲ್ಲಿ ಮಾತ್ರ ಸಂತುಷ್ಟನಾಗಿರುವುದು, ಶುಚಿತ್ವ, ಇತರರನ್ನು ದ್ವೇಷಿಸದಿರುವುದು, ಆತ್ಮಜ್ಞಾನ, ಸಹನೆ ಸರಳತನ – ಈ ಎಲ್ಲ ಉತ್ತಮಲಕ್ಷಣಗಳಿರುವ ಮಹಾಚೇತನ ನಮ್ಮ ತೀರ್ಥರೂಪರು ಎಂದು ಹೇಳಿದರೆ ಅತಿಶಯವಾಗಲಾರದು.

ಇಂದ್ರಿಯನಿಗ್ರಹ, ವೇದಾಧ್ಯಯನ, ಜ್ಞಾನದಿಂದಲೇ ತೃಪ್ತಿ, ಸ್ವಾಧ್ಯಾಯ, ಅಧ್ಯಾಪನ, ನಿಷ್ಕಾಮಕರ್ಮ ಮುಂತಾದ ಪ್ರಮುಖ ಲಕ್ಷಣಗಳಿಂದ ಕೂಡಿದ ನಮ್ಮ ತೀರ್ಥರೂಪರು ತಮ್ಮ ವಿದ್ಯೆ, ಸಂಪತ್ತು, ಬೌದ್ಧಿಕ ಸಾಮರ್ಥ್ಯಗಳನ್ನು ಆಡಂಬರ, ಕೀರ್ತಿ, ಸ್ವಾರ್ಥಕ್ಕಾಗಿ ತೊಡಗಿಸಿಕೊಳ್ಳದ ಸರಳ ಜೀವಿ.

ತಮ್ಮ ಏಳನೇ ವರ್ಷದಲ್ಲೇ ತಂದೆಯವರು ವಿಯೋಗಹೊಂದಿದ ಕಾರಣ ಬಡತನದೊಂದಿಗೆ ತಂದೆಯ ಪ್ರೀತಿಯಿಂದ ವಂಚಿತರಾದುದರಿಂದಲೇ ತಮ್ಮ ಕುಟುಂಬದ ಅತಿ ಹತ್ತಿರದ ಮತ್ತು ದೂರದ ಎಲ್ಲಾ ಸದಸ್ಯರಲ್ಲೂ, ಸಮಾಜಬಾಂಧವರೊಂದಿಗೂ ಅತಿ ಮಮತೆ-ಪ್ರೀತಿಯನ್ನು ತೋರಿಸದಿರುವ ನಿರ್ಲಿಪ್ತ ಸ್ವಭಾವವನ್ನು ರೂಢಿಸಿ ಕೊಂಡಿದ್ದರೂ ಅಜಾತಶತ್ರುಗಳಾಗಿದ್ದಾರೆ. ತಮ್ಮ ಹೆಂಡತಿ-ಮಕ್ಕಳ ಮೇಲೂ "ನೀತಿಗೆ ತಕ್ಕ ಪ್ರೀತಿ" ಎಂಬಂತೆ ಅವರ ಸ್ವಭಾವ ರೂಪಿತವಾಯಿತು. ಅದು ಇಂದಿಗೂ ಬದಲಾಗಲಿಲ್ಲ. ಇದು ಮೇಲ್ನೋಟಕ್ಕೆ ದೋಷವೆಂದು ಕಂಡರೂ ಈ ಸ್ವಭಾವವು ಕೃತ್ರಿಮವಲ್ಲದ ಕಾರಣ ಅಪರಿಗಣ್ಯವಾಗಿದೆ. ಕೆಲವು ವಿಷಯಗಳಲ್ಲಿ ಅವರು ಸ್ವಾರ್ಥಪರರೆಂದು ಕಂಡರೂ ಅದು ಅವರ ಶಿಸ್ತಿನ ಜೀವನದ ಒಂದು ಲಕ್ಷಣವಾಗಿದೆ. ನಮ್ಮ ತಂದೆಯವರ ಮುಖ್ಯವಾದ ವರ್ತನೆ ಮತ್ತು ವ್ಯಕ್ತಿತ್ವದ ಬಗ್ಗೆ ಒಂದು ಮಾತಲ್ಲಿ ಹೇಳುವುದಿದ್ದರೆ ವ್ಯಾವಹಾರಿಕವಾಗಿ- "ತನ್ನ ಜೀವನವಾಯಿತು, ತನ್ನ ಕರ್ತವ್ಯವಾಯಿತು". ಆಧ್ಯಾತ್ಮಿಕವಾಗಿ- "ತನ್ನ ನಿತ್ಯಾನುಷ್ಠಾನವಾಯಿತು, ಅಧ್ಯಾಪನದ ಮೂಲಕ ಜ್ಞಾನದಾನವಾಯಿತು".

ಜ್ಯೋತಿಷ ಮತ್ತು ಪೌರೋಹಿತ್ಯವನ್ನು ಮುಖ್ಯವೃತ್ತಿಯನ್ನಾಗಿ ಸ್ವೀಕರಿಸಿದರೂ ಧನಾಗಮನಿಷ್ಠೆ ಅವರನ್ನು ಕಾಡಲಿಲ್ಲ. ಆದುದರಿಂದಲೇ ಜ್ಯೋತಿರ್ವಿದ್ಯೆ ಮಾರಾಟದ ವಸ್ತುವಾಗಲಿಲ್ಲ. ಸ್ವಾಭಾವಿಕವಾಗಿ ವಾಕ್‌ಚಾತುರ್ಯ ಅಥವಾ ಮಾತಿನ ಮೋಡಿ ಅವರಲ್ಲಿರದಿದ್ದರೂ, ತಿಳಿಸಬೇಕಾದ ಎಲ್ಲಾ ಸತ್ಯಸಂಗತಿಗಳನ್ನು ನೇರವಾಗಿ ಹೇಳುತ್ತಿದ್ದರು. ಇವರ ಆಳವಾದ ಜ್ಯೋತಿಷ ಶಾಸ್ತ್ರಜ್ಞಾನದ ಪರಿಚಯವುಳ್ಳವರು ಮತ್ತು ಇವರ ಮೇಲೆ ಶ್ರದ್ಧೆಯನ್ನು ಬೆಳೆಸಿಕೊಂಡವರು ಮಾತ್ರ ಇವರಿಂದ ಮಾರ್ಗದರ್ಶನ ಪಡೆಯುತ್ತಿದ್ದಾರೆ. ತಮ್ಮ ವೃತ್ತಿಯ ಉತ್ಕರ್ಷದ ಸಮಯದಲ್ಲಿಯೂ ಎಂದೂ ಸಂಪತ್ತಿಗೆ ಮರುಳಾಗಲಿಲ್ಲ. ಸಾಮರ್ಥ್ಯವಿಲ್ಲದವರು ಕಡಿಮೆ ಸಂಭಾವನೆಯನ್ನು ಕೊಟ್ಟರೂ ಬೇಸರಿಸುತ್ತಿರಲಿಲ್ಲ. ಸಾಮರ್ಥ್ಯವಿದ್ದವರಿಂದ ಅದಕ್ಕಿಂತ ಹತ್ತು ಪಾಲು ಧಾರಾಳ ಸಂಭಾವನೆಯನ್ನು ಸ್ವೀಕರಿಸುವಾಗಲೂ ಸಂತೋಷದಿಂದ ಹಿಗ್ಗಲಿಲ್ಲ. ಅರ್ಥಾತ್ ಕಾಳಿದಾಸ ಹೇಳುವಂತೆ ಆಸಕ್ತಿ ಇಲ್ಲದೆ ಸುಖವನ್ನು ಅನುಭವಿಸುತ್ತಿದ್ದರು. ಇದರಿಂದಲೇ ಬ್ರಾಹ್ಮಣರಿಗೆ ಸಂಪೂರ್ಣನಿಷಿದ್ಧವಾದ ವಿದ್ಯೆಯ ಮಾರಾಟದ ಪ್ರಸಂಗ ಬಾರದೆ ವಿದ್ಯಾದಾನದ ಮಹತ್ತ್ವವನ್ನು ರಕ್ಷಿಸಿದಂತಾಯಿತು.

ತಮ್ಮ ಏಳನೇ ವರ್ಷ ಪ್ರಾಯದಲ್ಲೇ ತಂದೆ ಲಕ್ಷ್ಮೀನಾರಾಯಣ ತಂತ್ರಿಯವರು ದಿವಂಗತರಾದುದರಿಂದ ಪಿತೃ ವಿಯೋಗವನ್ನು ಹೊಂದಿದರೂ ಜ್ಞಾನವಿಮುಖರಾಗದೆ, ಅವರ ಮಾತೃಶ್ರೀಯವರಾದ ಸರಸ್ವತೀ ಅಮ್ಮನವರ ಆಶ್ರಯದಲ್ಲಿ ಉಡುಪಿಯ ಶ್ರೀಮದನಂತೇಶ್ವರ ದೇವಾಲಯದಲ್ಲಿ ನಡೆಯುತ್ತಿದ್ದ ಸಂಸ್ಕೃತ ಪಾಠಶಾಲೆಯಲ್ಲಿ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಆರಂಭಿಸಿದರು. ಕೊರಂಗ್ರಪಾಡಿ ಶ್ರೀ ನಾರಾಯಣ ತಂತ್ರಿಗಳಿಂದ ಸಂಸ್ಕೃತಾಧ್ಯಯನ ವನ್ನು ನಡೆಸಿ, ಮುಂದಿನ ವ್ಯಕ್ತಿತ್ವಕ್ಕೆ ಅಡಿಪಾಯವನ್ನು ಹಾಕಿಕೊಂಡರು. ಕೌಮಾರಾವಸ್ಥೆಯಲ್ಲೇ ಬೆಳ್ಳೆ ಶ್ರೀ ವಿಠಲಾಚಾರ್ಯರಿಂದ ಋಗ್ವೇದ ಹಾಗೂ ಪೌರೋಹಿತ್ಯಾಧ್ಯಯನವನ್ನು ನಡೆಸಿ, ಪೌರೋಹಿತ್ಯವೃತ್ತಿಯಲ್ಲಿ ದಾಪುಗಾಲನ್ನಿಡಲು ಪ್ರಾರಂಭಿಸಿದರು. ಇದರ ಜೊತೆಗೆ ಜ್ಯೋತಿರ್ವಿದ್ಯೆಯಲ್ಲಿ ಚಲಿಸುವ ಕೋಶವೆಂದೆನಿಸಿದ ಶ್ರೀ ಯಂ. ಭೀಮಾಚಾರ್ಯರಲ್ಲಿ ಜ್ಯೋತಿಶ್ಶಾಸ್ತ್ರದ ಅಧ್ಯಯನವನ್ನು ಮಾಡುತ್ತಾ ಜ್ಯೋತಿಶ್ಶಾಸ್ತ್ರದ ಮರ್ಮವನ್ನು ತಿಳಿದು ಅವರ ಪಟ್ಟಶಿಷ್ಯರಾದರು.

ಇದೇ ಸಂದರ್ಭದಲ್ಲಿ ಆಗಮವೇತ್ತರಾದ ಶ್ರೀ ಕಾಳು ತಂತ್ರಿ(ರಾಮಕೃಷ್ಣ ತಂತ್ರಿ)ಯವರ ಶಿಷ್ಯೋತ್ತಮರಾಗಿ ವ್ಯಕ್ತಿತ್ವದ ಹೊಸ ಮಜಲನ್ನು ಕಂಡರು.

ಯೌವನಾವಸ್ಥೆಗೆ ಕಾಲಿರಿಸಿದೊಡನೆ ಅರ್ಥಾತ್ ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿ ಪುತ್ತೂರು ಸುಬ್ರಹ್ಮಣ್ಯ ತಂತ್ರಿಯವರ ಸುಪುತ್ರಿ, ಹನ್ನೆರಡು ವರ್ಷದ ಲಕ್ಷ್ಮಿಯೆಂಬವರೊಂದಿಗೆ ವಿವಾಹವಾಗಿ ಗೃಹಸ್ಥಾಶ್ರಮಕ್ಕೆ ಕಾಲಿರಿಸಿದರು.

ಬಾಲ್ಯದಲ್ಲಿ ಮಕ್ಕಳಾಟದಿಂದ ಮತ್ತು ಕೌಮಾರ್ಯದ ಸುಖದಿಂದ ವಂಚಿತರಾದರೂ ಜ್ಞಾನಾಕಾಂಕ್ಷಿ ಆದುದರಿಂದಲೇ ವಿದ್ಯೆಯಿಂದ ವಿಮುಖರಾಗದೆ, ಆರ್ಥಿಕ ದುಃಸ್ಥಿತಿಯನ್ನು ಮೆಟ್ಟಿ ನಿಂತು ಪುರುಷಪ್ರಯತ್ನವನ್ನು ಆಶ್ರಯಿಸಿ ವಿದ್ಯಾವಿನಯ ಸಂಪನ್ನರಾದರು. ಅವರನ್ನು ಅವರೇ ರೂಪಿಸಿಕೊಂಡು Self made ಎನಿಸಿಕೊಂಡಿದ್ದಾರೆ. ಈ ಸುಭಾಷಿತಗಳೆರಡೂ ಅವರಿಗೇ ನೇರ ಅನ್ವಯಿಸುವವು-

"ಉದ್ಯಮೇನೈವ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ ।"

"ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ"

ಹೆತ್ತವರ ಪ್ರೋತ್ಸಾಹ ಸಹಾಯ ಮಾರ್ಗದರ್ಶನವಿಲ್ಲದಿದ್ದರೂ ಸ್ವಸಂಕಲ್ಪದಂತೆ ಸ್ವಪ್ರೇರಣೆಯಿಂದಲೇ ವಿದ್ಯಾವಿನಯ ಸಂಪನ್ನರಾದ ನನ್ನ ತೀರ್ಥರೂಪರೇ ನನಗೂ ಆದರ್ಶರಾದರು. ನಾನೂ ಕೂಡ ನನ್ನ ಹೆತ್ತವರ ಯಾವ ಮಾರ್ಗದರ್ಶನ-ಸಹಾಯ-ಪ್ರೇರಣೆ ಇಲ್ಲದಿದ್ದರೂ ಸ್ವಯಂ ಪ್ರೇರಣೆಯಂತೆ, ಮಾಡಿದ ಸಂಕಲ್ಪದಂತೆ ಸಂಪ್ರದಾಯರೀತ್ಯಾ ಸಂಸ್ಕೃತಾಧ್ಯಯನವನ್ನರಿತು ವಿಶ್ವವಿದ್ಯಾನಿಲಯದ ಪದವಿಗಳನ್ನೂ ಪಡೆದು ಶಿಕ್ಷಕವೃತ್ತಿಯನ್ನೂ ಸ್ವೀಕರಿಸಿ ಯಶಸ್ವಿಯಾಗಿದ್ದೇನೆ. ನಾನು ಜ್ಯೋತಿರ್ವಿದ್ಯೆಯಲ್ಲಿ ವಿಮುಖನಾದರೂ ಆನುವಂಶೀಯದ ಪ್ರಭಾವದಿಂದ ನನ್ನ ಮಗನೀಗ ಈ ವಿದ್ಯೆಯನ್ನು ಮುಂದುವರಿಸಿ ರಕ್ಷಿಸಿ ಪೋಷಿಸುತ್ತಿದ್ದಾನೆ.

ಜವಾಬ್ದಾರಿ ಬಂದಂದಿನಿಂದ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದ್ದ ನನ್ನ ತೀರ್ಥರೂಪರಿಗೆ, ಆ ಕಾಲದಲ್ಲಿ ಆರ್ಥಿಕ ಸಹಾಯ ಮಾಡುವವರೂ ವಿರಳರಾಗಿದ್ದರು.

ಹಣ ಗಳಿಸುವ ಕಷ್ಟದ ಅನುಭವವಿದ್ದ ಕಾರಣವೇ, ಅನಗತ್ಯವಾಗಿ ಹಣ ವ್ಯಯ ಮಾಡುವುದಕ್ಕೆ ಅಥವಾ ದುಂದುವೆಚ್ಚಕ್ಕೆ ಸಮ್ಮತಿಸುತ್ತಿರಲಿಲ್ಲ. ಜೀವನದ ಎಲ್ಲಾ ವಿಷಯಗಳಲ್ಲೂ ಒಂದು ಇತಿ-ಮಿತಿಯನ್ನು ಮೀರುತ್ತಿರಲಿಲ್ಲ. ಐವರು ಹೆಣ್ಣುಮಕ್ಕಳನ್ನು ಹಾಗೂ ಮೂವರು ಗಂಡುಮಕ್ಕಳನ್ನು ಪ್ರೀತಿಯಿಂದ ಆದರೆ ಅತಿಮಮತೆ ಇಲ್ಲದೆ ಪೋಷಿಸಿ ಕಾಲಕಾಲಕ್ಕೆ ಮಗಳಂದಿರ ಮದುವೆಯನ್ನು ಪೂರೈಸುತ್ತಾ ರಿಕ್ತಹಸ್ತರಾಗುತ್ತಿದ್ದರು. ಆದರೆ ಅವರ ಪೂರ್ವಾರ್ಧದ ತಪಸ್ಸದೃಶವಾದ ನಿಷ್ಕಾಮಜೀವನದ ಫಲವೋ ಎಂಬಂತೆ ಜೀವನದ ಉತ್ತರಾರ್ಧದಲ್ಲಿ ಎಲ್ಲ ಆರ್ಥಿಕ ತಾಪತ್ರಯಗಳನ್ನೂ ಕಳಚಿ ಜೀವನದಲ್ಲಿ ನೆಮ್ಮದಿಯ ನೆಲೆಯನ್ನು ಕಂಡಿದ್ದಾರೆ. ಜೀವನದ ಈ ಪಶ್ಚಿಮ ವಯಸ್ಸಿನಲ್ಲಿ ಅವರ ಮತ್ತು ಮಾತೃಶ್ರೀಯವರ ಅನಾರೋಗ್ಯದ ಆಘಾತಕ್ಕೊಳಗಾದರೂ ನನ್ನ ಮತ್ತು ನನ್ನ ಪತ್ನಿ

ಉಮಾಳಸೇವೆಯು ಪೂರ್ಣವಾಗಿ ಲಭ್ಯವಾದುದರಿಂದ ನಿಶ್ಚಿಂತರಾಗಿದ್ದಾರೆ. ತಾಯಿತಂದೆಯರ ಸ್ವಭಾವವರ್ತನೆಯು ಸ್ವಂತ ಮಕ್ಕಳನ್ನು ಆಕರ್ಷಿಸದಿದ್ದರೂ ನಾವು ಮಾತ್ರ ಹೆತ್ತವರ ಸ್ವಭಾವಕ್ಕೆ ಹೊಂದಿಕೊಂಡು ಮನಸ್ಸನ್ನು ಅರ್ಥ ಮಾಡಿಕೊಂಡು ಪಿತೃಋಣವನ್ನು ತೀರಿಸುವ ಕರ್ತವ್ಯಕರ್ಮವನ್ನು ಮಾಡುತ್ತಿದ್ದೇವೆ.

ಜ್ಯೋತಿಷದ ದಿಗ್ಗಜರಾದ ಶ್ರೀ ಎಂ. ಭೀಮಾಚಾರ್ಯ, ಶ್ರೀ ಕಾಳು ತಂತ್ರಿ ಮೊದಲಾದವರು ಹುಟ್ಟು ಹಾಕಿದ 'ವಿಜ್ಞಾನಧಾಮ'ವು ಆ ಕಾಲದ ಬ್ರಾಹ್ಮಣಸಮಾಜದ ಸಮಾನಮನಸ್ಕರ ಕೇಂದ್ರಸ್ಥಾನವೂ ಶ್ರದ್ಧಾಕೇಂದ್ರವೂ ಆಗಿತ್ತು. ಜ್ಯೋತಿಷಕ್ಕೆ ಸಂಬಂಧಿಸಿದ ಚಟುವಟಿಕೆಗಳು ಇಲ್ಲಿ ಹೆಚ್ಚಾಗಿ ನಡೆಯುತ್ತಿದ್ದವು. ಇದೊಂದು ಶಿವಳ್ಳಿ ಬ್ರಾಹ್ಮಣರ ಪರಸ್ಪರ ಸಹಕಾರಸಂಘವೂ ಆಗಿತ್ತು. ಅಸಂಖ್ಯಾತ ಬ್ರಾಹ್ಮಣರು ಇದರ ಸದಸ್ಯರೂ ಆಗಿದ್ದರು. ನನ್ನ ತಂದೆಯವರು ಮೊದಲು ಅಲ್ಲೇ ಜ್ಯೋತಿಶ್ಶಾಸ್ತ್ರದ ಅಧ್ಯಯನ ಮಾಡಿ ಅನಂತರ ಅಲ್ಲೇ ಜ್ಯೋತಿಷವೃತ್ತಿಯನ್ನೂ ಜ್ಯೋತಿಷದ ಅಧ್ಯಾಪನ ಪ್ರವೃತ್ತಿಯನ್ನೂ ಪ್ರಾರಂಭಿಸಿದರು. ಈ ವಿಜ್ಞಾನಧಾಮದ ಜವಾಬ್ದಾರಿಯನ್ನು ಚಿಕ್ಕವಯಸ್ಸಿನಲ್ಲೇ ವಹಿಸಿಕೊಂಡ ಕೀರ್ತಿ ಅವರದ್ದು.

ವಿಜ್ಞಾನಧಾಮದಲ್ಲಿ ದಿನದ ವ್ಯವಹಾರ ಮುಗಿಸಿ ಮನೆಗೆ ಹಿಂತಿರುಗುತ್ತಿದ್ದಾಗ ರಾತ್ರಿ ಹತ್ತು ಗಂಟೆಯಾಗುತ್ತಿತ್ತು. ಉಡುಪಿಯಿಂದ ನಾಲ್ಕು ಕಿಲೋಮೀಟರ್ ನಡೆದೇ ಬರಬೇಕಾಗಿತ್ತು. ತಾಯಿಯವರು ಮಕ್ಕಳಿಗೆ ಊಟ ಮಾಡಿಸಿ, ಮಲಗಿಸಿ, ಪತಿಗಾಗಿ ಕಾಯುತ್ತಾ ಕುಳಿತಿರುತ್ತಿದ್ದರಂತೆ.

ಗುರುಗಳಾದ ಕಾಳು ತಂತ್ರಿಯವರ ಮಾರ್ಗದರ್ಶನದಲ್ಲಿ ಜ್ಯೋತಿಷವೃತ್ತಿಯನ್ನು ಪ್ರಾರಂಭಿಸಿ ಅಪಾರ ಅನುಭವವನ್ನು ಹೆಚ್ಚಿಸಿಕೊಂಡರು. ಆ ಕಾಲದಲ್ಲಿ ಅಷ್ಟಮಂಗಲ ಪ್ರಶ್ನೆಯನ್ನು ಮಾಡುವವರು ಬೇರೆ ಇರಲಿಲ್ಲ. ಬೇಕಿದ್ದರೆ ಕೇರಳದ ವಿದ್ವಾಂಸರು ಬರುತ್ತಿದ್ದರು.

ಗುರುಗಳ ಕಾಲಾನಂತರ ಜ್ಯೋತಿಷವೃತ್ತಿಯನ್ನು ಸ್ವತಂತ್ರವಾಗಿ ಮುಂದುವರಿಸಿಕೊಂಡು ಹೋದರು. ಹೇಗೆ ತನ್ನ ಗುರುಗಳು ಅಪಾರ ಶಿಷ್ಯರನ್ನು ನಿರ್ಮಿಸಿ ಸಮಾಜಕ್ಕೆ ಅರ್ಪಿಸಿದರೋ ಅದೇ ಪಥದಲ್ಲಿ ನನ್ನ ತೀರ್ಥರೂಪರೂ ಆವತ್ತಿನಿಂದ ಇವತ್ತಿನವರೆಗೂ ಅರ್ಥಾತ್ ಸುಮಾರು ಆರು ದಶಕಗಳಲ್ಲಿ ಅಸಂಖ್ಯಾತ ಜ್ಯೋತಿಷಜಿಜ್ಞಾಸುಶಿಷ್ಯರಿಗೆ ಪಾಠ ಪ್ರವಚನವನ್ನು ಮಾಡಿ ಸಮಾಜಕ್ಕೆ ಅರ್ಪಿಸಿ ಗುರುಋಣವನ್ನು ತೀರಿಸಿದ್ದಾರೆ.

ನಮ್ಮ ಮನೆಯೊಂದು ಜ್ಯೋತಿಷ ಪಾಠಶಾಲೆಯೇ ಆಗಿದೆ. ಬೆಳಗ್ಗೆ ಆರು ಗಂಟೆಗೆ ಪಾಠವನ್ನು ಪ್ರಾರಂಭಿಸಿ ರಾತ್ರಿ ಒಂಬತ್ತರವರೆಗೂ ಮಧ್ಯೆ ಸ್ನಾನಾದಿನಿತ್ಯಾನುಷ್ಠಾನ, ಭೋಜನ-ವಿಶ್ರಾಂತಿ ವಿರಾಮದ ಹೊರತುಪಡಿಸಿ ನಿರಂತರವಾಗಿ ಅಧ್ಯಾಪನದಲ್ಲಿ ನಿರತರಾಗುವರು. ಮಧ್ಯಮಗಾತ್ರದ ಮನೆಯಾದುದರಿಂದ ಪಾಠಪ್ರವಚನ ನಡೆಸುತ್ತಿದ್ದ ಚಾವಡಿಯಲ್ಲೇ ದೂರದರ್ಶನವೂ ಇದ್ದುದರಿಂದ ಮನೆ ಹೆಂಗಸರಿಗೆ ಮತ್ತು ಇತರರಿಗೆ ಆಸಕ್ತಿ ಇದ್ದರೂ ದೂರದರ್ಶನವೀಕ್ಷಣೆಯಿಂದ ವಂಚಿತರಾಗುತ್ತಿದ್ದರು. ಆದರೂ ಎಲ್ಲರೂ ಇದನ್ನು ಸಹಿಸಿಕೊಂಡು ಸಹಕರಿಸುತ್ತಿದ್ದೆವು.

ವೇದ ಮತ್ತು ಪೌರೋಹಿತ್ಯವನ್ನು ಬಾಲ್ಯದಿಂದಲೇ ಅಧ್ಯಯನ ಮಾಡಿದುದರಿಂದ ಪೌರೋಹಿತ್ಯವನ್ನೂ ಜ್ಯೋತಿಷದ ವೃತ್ತಿಯೊಂದಿಗೇ ನಡೆಸುತ್ತಿದ್ದರು. ಇವರೊಬ್ಬರು ಆದರ್ಶಪುರೋಹಿತರೂ ಆಗಿದ್ದರು. ಕೆಲವು ಮಂದಿ ಸಾಮಾನ್ಯ ಪುರೋಹಿತರಂತೆ ದುರುದ್ದೇಶದಿಂದ ಪರದ್ರವ್ಯಗಳ ಬಗ್ಗೆ ಆಸೆ ಪಟ್ಟವರಲ್ಲ. ದಕ್ಷಿಣೆಯ ಬಗ್ಗೆ ಗಮನವಿಟ್ಟವರಲ್ಲ. ಜನರನ್ನು ಮರುಳುಗೊಳಿಸುವುದಕ್ಕಾಗಿ ಆಡಂಬರಕ್ಕೆ ಶರಣಾಗಲಿಲ್ಲ. ಯಾವುದಾದರೊಂದು ಧಾರ್ಮಿಕಕ್ರಿಯೆಯನ್ನು ಮಾಡಲು ಒಪ್ಪಿಕೊಂಡಾಗ ಯಜಮಾನರ ಸಾಮರ್ಥ್ಯಕ್ಕನುಗುಣವಾದ ವೆಚ್ಚದಲ್ಲಿ ಮಾಡಿಮುಗಿಸುತ್ತಿದ್ದರು.

ಅದ್ರೋಹೋಽನಭಿಮಾನಶ್ಚ ಹ್ರೀಸ್ತಿತಿಕ್ಷಾ ದಮಃ ಶಮಃ ।
ಯಸ್ಮಿನ್ನೇತಾನಿ ದೃಶ್ಯಂತೇ ಸ ಪುರೋಹಿತ ಉಚ್ಯತೇ ॥

ಧೀಮಾನ್ ಸತ್ಯಧೃತಿರ್ದಾಂತೋ ಭೂತಾನಾಮವಿಹಿಂಸಕಃ ।
ಅಕಾಮದ್ವೇಷಸಂಯುಕ್ತಸ್ತ್ರಿಭಿಃ ಶುಕ್ಲೈಃ ಸಮನ್ವಿತಃ ॥
ಅಹಿಂಸಕೋ ಜ್ಞಾನತೃಪ್ತಃ ಸ ಪುರೋಹಿತ ಉಚ್ಯತೇ ॥

(ಮೂರು ಶುಕ್ಲಗಳೆಂದರೆ- ಶಾಸ್ತ್ರಜ್ಞಾನ, ಸದಾಚಾರ ಮತ್ತು ಸತ್ಕುಲಪ್ರಸೂತಿ)

ಈ ಎಲ್ಲಾ ಪುರೋಹಿತರ ಲಕ್ಷಣಗಳು ಇವರಲ್ಲಿವೆ, ಎಂದೇ ನನ್ನ ಭಾವನೆ. ಇವರೆಂದೂ ದಕ್ಷಿಣೆಗೆ ಅಥವಾ ಪರದ್ರವ್ಯಕ್ಕೆ ಆಸೆ ಪಡದೆ ಪೌರೋಹಿತ್ಯ ನಡೆಸುತ್ತಿದ್ದರು. ಸಮರ್ಥರು ಹೆಚ್ಚು ಕೊಟ್ಟಾಗ ಆಸೆ-ಆಸಕ್ತಿ ಇಲ್ಲದೆ ಸ್ವೀಕರಿಸುತ್ತಿದ್ದರು. ಅನುಕೂಲವಿಲ್ಲದವರು ಕಡಿಮೆ ದಕ್ಷಿಣೆ ಕೊಟ್ಟಾಗ ಕಮ್ಮಿಯಾಯಿತೆಂದು ಭಾವಿಸದೆ ಸಮಾನದೃಷ್ಟಿಯಿಂದ ಅವರಿಗೂ ಹಿತವನ್ನು ಬಯಸುತ್ತಿದ್ದರು.

ಜೀವನದ ಉತ್ತರಾರ್ಧ ಪ್ರಾರಂಭವಾದಂತೆ ಪೌರೋಹಿತ್ಯವೃತ್ತಿಯನ್ನು ಕಡಮೆಗೊಳಿಸಿ, ಈಗ ಸಂಪೂರ್ಣ ನಿಲ್ಲಿಸಿದ್ದಾರೆ. ಈ ಪಶ್ಚಿಮ ವಯಸ್ಸಿನಲ್ಲಿ ಮನೆಯಿಂದ ಹೊರಗೆ ಹೋಗಿ ಜ್ಯೋತಿಷ ಚಟುವಟಿಕೆಗಳನ್ನೂ ಸಂಪೂರ್ಣ ನಿಲ್ಲಿಸಿದ್ದಾರೆ. ಆದರೆ ಸ್ವಗೃಹದಲ್ಲಿ ಶ್ರದ್ಧಾವಂತರಿಗಾಗಿ ಮಾತ್ರ ಜ್ಯೋತಿಷ ಚಟುವಟಿಕೆಗಳನ್ನು ಮುಂದುವರಿಸಿದ್ದಾರೆ.

"ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್"

ಎಂಬ ಉಪನಿಷದ್ವಾಕ್ಯದಂತೆ ತಮ್ಮ ತಾರುಣ್ಯದಿಂದಲೂ ಸ್ವಾಧ್ಯಾಯ ಪ್ರವಚನವನ್ನು ಮಾಡುತ್ತಾ ಮಾಡುತ್ತಾ ಧರ್ಮಗುರುಗಳಿಗೇ ಗುರುಗಳಾದ ಅಪೂರ್ವ ಅದೃಷ್ಟವು ಅವರ ಜೀವನದ ಅವಿಸ್ಮರಣೀಯ ವಿಷಯವಾಗಿದೆ.

ಪಲಿಮಾರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾಧೀಶ ಶ್ರೀಪಾದರೂ, ಪುತ್ತಿಗೆ ಮಠಾಧೀಶರಾದ ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದರೂ ತಮ್ಮ ಪರ್ಯಾಯಕಾಲದ ಎರಡು ವರ್ಷಕಾಲ ದಿನಕ್ಕೆ ಒಂದೆರಡು ಗಂಟೆಯವರೆಗೆ ನನ್ನ ತಂದೆಯವರಿಂದ ಜ್ಯೋತಿಷಪಾಠವನ್ನು ಕೇಳಿ, ಜ್ಯೋತಿಶ್ಶಾಸ್ತ್ರವನ್ನು ಸ್ವಯಂ ತಿಳಿದು ತುಲನಾತ್ಮಕವಾಗಿ ಅಧ್ಯಯನ ಮಾಡಿ, ಶುದ್ಧ ದೃಕ್ಸಿದ್ಧಾಂತಗಣಿತಾನುಸಾರ ಪಂಚಾಂಗವನ್ನು ರಚಿಸಲು ಪಣ ತೊಟ್ಟರು. ಅಲ್ಲಲ್ಲಿ ಹಲವಾರು ವಿಚಾರಗೋಷ್ಠಿಗಳನ್ನು ನಡೆಸುತ್ತಾ ಪ್ರಚಾರ ಮಾಡುತ್ತಾ ಕೊನೆಗೆ ನವೀನ ದೃಕ್ಸಿದ್ಧಾಂತಗಣಿತಾನುಸಾರ ಹೊಸ ಪಂಚಾಂಗವನ್ನು ಪ್ರಾರಂಭಿಸಿದರು. ಹೀಗಾಗಿ ಈ ಸಿದ್ಧಾಂತಗಳ ಆಂದೋಲನದಲ್ಲಿ ನನ್ನ ತೀರ್ಥರೂಪರ ಪಾತ್ರವೂ ಮಹತ್ತ್ವದ್ದಾಗಿದೆ.

* * *

# ತಸ್ಯ ನ ಮಿಥ್ಯಾಭವದ್ವಾಣೀ

● ಅನಂತಪದ್ಮನಾಭ ಆಸ್ರಣ್ಣ
ಪ್ರಧಾನ ಅರ್ಚಕರು, ಶ್ರೀಕ್ಷೇತ್ರ ಕಟೀಲು.

'ದೈವಜ್ಞಂ ದೈವವತ್ ಪಶ್ಯೇತ್' ದೈವಜ್ಞರನ್ನು ದೇವರಂತೆ ಕಾಣಬೇಕು ಎಂಬ ಮಾತು ಪ್ರಶ್ನಶಾಸ್ತ್ರದಲ್ಲಿ ದೈವಜ್ಞನ ಸ್ಥಾನ ಹಿರಿದಾದದ್ದು ಎಂದು ತಿಳಿಸುತ್ತದೆ.

ಅನೇಕ ಹೋರಾತತ್ತ್ವಜ್ಞಃ ಪಂಚಸಿದ್ಧಾಂತಕೋವಿದಃ ।
ಊಹಾಪೋಹಪಟುಃ ಸಿದ್ಧಮಂತ್ರೋ ಜಾನಾತಿ ಜಾತಕಮ್ ॥
ಸತ್ಯವಚಾಃ ವಿನಯೀ ವೇದಾಧ್ಯಾಯೀ ಗ್ರಹಯಜನಪಟುಶ್ಚ ಭವತು ದೈವಜ್ಞಃ ॥

ಗಣಿತ, ಸಂಹಿತಾ, ಹೋರಾಸ್ಕಂಧಗಳ ಜ್ಞಾನ, ಕರ್ಮವಿಪಾಕವಿಧಿಜ್ಞಾನ ಹಾಗೂ ಆಗಮಶಾಸ್ತ್ರದ ವಿಶೇಷಜ್ಞಾನ ಇವೆಲ್ಲಾ ಇರುವವನೊಬ್ಬ ಮಹತ್ತರ ಜ್ಞಾನಿ ಎನಿಸಲು ಯೋಗ್ಯನು. ಅಂತಹ ಜ್ಞಾನಿ ಎನಿಸಿ ಗುಣದಲ್ಲೂ ಜೀವನದಲ್ಲೂ ಆಹಾರದಲ್ಲೂ ಸಾತ್ತ್ವಿಕತೆಯನ್ನು ಮೆರೆದ ಮಹನೀಯರೆಂದರೆ ಶ್ರೀ ಬೈಲೂರು ಅನಂತಪದ್ಮನಾಭ ತಂತ್ರಿಗಳೇ ಸರಿ. ತಂತ್ರ, ಜ್ಯೋತಿಷ ಹಾಗೂ ಕರ್ಮವಿಪಾಕ ಗ್ರಂಥಗಳ ತಲಸ್ಪರ್ಶಿ ಪಾಂಡಿತ್ಯ ಪಡೆದ ವೇದಾಧ್ಯಯನಶೀಲರೂ ಸಿದ್ಧಮಂತ್ರರೂ ಆದ ಬೈಲೂರು ತಂತ್ರಿಗಳು ಯಾವ ಜೀವಿಗೂ ಕೆಡುಕೆನಿಸದೆ ಎಲ್ಲರಿಗೂ ಹಿತವನ್ನು ಬಯಸುತ್ತಾ ಸಮಾಜದಲ್ಲಿ ಉನ್ನತಸ್ಥಾನಕ್ಕೇರಿದ್ದಾರೆ. ಕೇರಳರಾಜ್ಯನಿವಾಸಿ ಶ್ರೀಯುತ ಭೀಮಾಚಾರ್ಯರ ಪರಮಶಿಷ್ಯರಾದ ಶ್ರೀಯುತ ತಂತ್ರಿಗಳು ಕೇರಳ ಸಹಿತವಾಗಿ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಪ್ರಸಿದ್ಧ ದೇವಾಲಯಗಳಲ್ಲಿ ತನ್ನದಾದ ಜ್ಞಾನಭಂಡಾರ ಹಾಗೂ ಮಂತ್ರಸಿದ್ಧಿಯಿಂದ ದೈವಜ್ಞವೃತ್ತಿಯನ್ನು ಯಾವ ರೀತಿ ನಿರ್ವಹಿಸಿದ್ದಾರೆ ಎನ್ನುವುದಕ್ಕೆ ಈ ಕೆಳಗಿನ ನಿದರ್ಶನಗಳು ಸಾಕ್ಷೀಭೂತಗಳಾಗಿವೆ.

ಪ್ರಸಿದ್ಧಕ್ಷೇತ್ರವಾದ ಕಟೀಲು ಶ್ರೀದುರ್ಗಾಪರಮೇಶ್ವರೀ ದೇವಾಲಯದಲ್ಲಿ ಅಷ್ಟಮಂಗಲಪ್ರಶ್ನೆ ಇಟ್ಟ ಸಂದರ್ಭದಲ್ಲಿ ಬ್ರಹ್ಮಕಲಶ ದುರ್ಮುಹೂರ್ತದಲ್ಲಿ ನಡೆದಿದ್ದರಿಂದ ಸಾನ್ನಿಧ್ಯಕ್ಕೆ ಕ್ಲೇಶವಿದೆ ಎಂದು ತಿಳಿಸಿ ಇದಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತವನ್ನು ನಿರ್ದೇಶಿಸಿದ್ದಾರೆ. ಇಲ್ಲಿಯ ಮೂಲಸ್ಥಳವಾದ ದೇವಳದ ಪೂರ್ವಭಾಗದ ನದೀಮಧ್ಯದಲ್ಲಿ ವಿರಾಜಿಸುವ ದ್ವೀಪ(ಕುದುರು)ವನ್ನು ವಶಪಡಿಸಿಕೊಂಡು ಅಲ್ಲಿಯೂ ಶ್ರೀದೇವಿಯ ಆರಾಧನೆ ನಡೆಸಿಕೊಂಡುಬಂದರೆ ಮೂಲಬಿಂಬದಲ್ಲೂ ಸಾನ್ನಿಧ್ಯಾಭಿವೃದ್ಧಿಯಾಗಿ ಮನೋಭೀಷ್ಟಸಿದ್ಧಿಯಾಗುವುದೆಂದು ತಿಳಿಸಿದ್ದಾರೆ. ಹೀಗೆ ಮಾಡದಿದ್ದಲ್ಲಿ ಇಲ್ಲಿ ಕಲಹ ತಪ್ಪಿದ್ದಲ್ಲ ಎಂದೂ ಎಚ್ಚರಿಸಿದ್ದಾರೆ.

ಬೆಳ್ತಂಗಡಿ ತಾಲೂಕಿನ ತೆಂಕಕಾರಂದೂರು ಗ್ರಾಮದ ವಿಷ್ಣುಮೂರ್ತಿ ದೇಗುಲದಲ್ಲಿ ನಡೆದ ದೇವಪ್ರಶ್ನೆಯಲ್ಲಿ ಈ ಕ್ಷೇತ್ರದ ಶ್ರೇಯೋಭಿವೃದ್ಧಿಯು ಆಗಿನ ಆಡಳ್ತೆ ಮೊಕ್ತೇಸರರ ಕಾಲದಲ್ಲಿ ಆಗುವುದಿಲ್ಲ. ಅವರ ಮಕ್ಕಳ ಸಂಪಾದನೆಯ ಹಣದಿಂದ ಆಗುತ್ತದೆ ಎಂದು ತಿಳಿಸಿದ್ದರು. ಅವರ ಮಾತಿನಂತೆ ಮೊಕ್ತೇಸರರ ಮಕ್ಕಳ ನೆರವಿನಿಂದ ಇತ್ತೀಚೆಗಷ್ಟೇ ಜೀರ್ಣೋದ್ಧಾರಬ್ರಹ್ಮಕಲಶಗಳು ಬಹಳ ವಿಜೃಂಭಣೆಯಿಂದ ನಡೆದವು.

ಕಾರ್ಕಳ ತಾಲೂಕಿನ ಕಡಂದಲೆ ಸುಬ್ರಹ್ಮಣ್ಯಕ್ಷೇತ್ರದ ಅಷ್ಟಮಂಗಲಪ್ರಶ್ನೆಯ ಪ್ರಸಂಗದಲ್ಲಿ ಈ ಸುಬ್ರಹ್ಮಣ್ಯ ದೇವರು ಹಂಪೆಯ ವಿಜಯನಗರದಿಂದ ಬಂದು ಪ್ರತಿಷ್ಠಾಪನೆಗೊಂಡ ಸಾನ್ನಿಧ್ಯವಾಗಿದೆ. ಆದರೆ ಪುರಾತನ ಗ್ರಾಮದೇವರಾದ ಸೂರ್ಯನಾರಾಯಣದೇಗುಲವು ನಶಿಸಿಹೋಗಿದೆ. ಸೂರ್ಯನಾರಾಯಣವಿಗ್ರಹ ವನ್ನು ತೀರ್ಥ ಕೆರೆಗೆ ಹಾಕಿದ್ದಾರೆ. ಆ ಸೂರ್ಯನಾರಾಯಣಸ್ವಾಮಿಯನ್ನು ಪ್ರತ್ಯೇಕವಾಗಿ ಗುಡಿ ನಿರ್ಮಿಸಿ ಪ್ರತಿಷ್ಠಾಪಿಸಿದಲ್ಲಿ ಸಕಲ ಶ್ರೇಯೋಭಿವೃದ್ಧಿಯಾಗುವುದೆಂದು ತಿಳಿಸಿರುವರು.

ಕುಂದಾಪುರ ತಾಲೂಕಿನ ಸಾಲಿಗ್ರಾಮದ ಗುರುನರಸಿಂಹಸ್ವಾಮಿಕ್ಷೇತ್ರದಲ್ಲಿ ಬಹಳ ವಿದ್ವಾಂಸರ ಕೂಡುವಿಕೆಯಿಂದ ನಡೆದ ಅಷ್ಟಮಂಗಲಪ್ರಶ್ನೆಯಲ್ಲಿ ಶಾಲಗ್ರಾಮಶಿಲೆಯಿಂದ ನಿರ್ಮಿಸಲ್ಪಟ್ಟ ನರಸಿಂಹಸ್ವಾಮಿಯ ವಿಗ್ರಹವು ಭಿನ್ನವಾಗಿದ್ದು ಆದರಿಂದಾಗಿ ಸಾನ್ನಿಧ್ಯಕ್ಕೂ ಭಕ್ತಜನರಿಗೂ ಪ್ರತಿಕೂಲವಾಗಿದೆ. ಇದು ಭಿನ್ನವಾಗಿ ನಾಲ್ಕೈದು ಶತಮಾನಗಳು ಕಳೆದಿವೆ. ಬಿಂಬದ ಭಿನ್ನತೆ ಪರಿಹರಿಸಿದಲ್ಲಿ ಕ್ಷೇತ್ರ ಅಭಿವೃದ್ಧಿಯಾಗುವುದೆಂದು ತಿಳಿಸಿದ್ದಾರೆ. ನಿರಂತರ ವೇದಘೋಷಗಳು ನಡೆಯಬೇಕೆಂದೂ ಆದೇಶಿಸಿದ್ದಾರೆ. ಕೇರಳದ ಶಿಲ್ಪಿಗಳ ಸಹಾಯದಿಂದ ಈ ಭಿನ್ನತೆಯನ್ನು ಸರಿಪಡಿಸಲಾಗಿದೆ. ಈ ಕ್ಷೇತ್ರವು ಕೋಟ ಬ್ರಾಹ್ಮಣ ಸಮಾಜದ ಗುರುಪೀಠವಾಗಿದ್ದು ಬಹಳ ಅಭಿವೃದ್ಧಿಯಿಂದ ಮೆರೆಯುತ್ತಿದೆ.

ಉಡುಪಿ ತಾಲೂಕಿನ ಪಡುಬಿದ್ರೆ ಬ್ರಹ್ಮಸ್ಥಾನದ ಸ್ವಯಂಭೂಶಕ್ತಿಗಳಾದ ಬ್ರಹ್ಮ, ನಾಗ, ಖಡ್ಗೇಶ್ವರೀ ಶಕ್ತಿಗಳ ಪಾವಿತ್ರ್ಯವನ್ನು ಎತ್ತಿತೋರಿಸಿ, ಈ ಸನ್ನಿಧಾನಕ್ಕೆ ಒಬ್ಬ ವ್ಯಕ್ತಿಯಿಂದ ಸ್ಪರ್ಶದೋಷ ಬರುತ್ತಾ ಇದ್ದು ಸ್ವಲ್ಪ ಸಮಯದೊಳಗೆ ಆ ವ್ಯಕ್ತಿ ಕಾಣಸಿಗುತ್ತಾನೆಂದು ತಿಳಿಸಿರುತ್ತಾರೆ. ಅದರಂತೆ ವ್ಯಕ್ತಿಯೋರ್ವನು ಗೋಚರನಾಗಿದ್ದಾನೆ. ಈ ಎಲ್ಲಾ ಅಶುದ್ಧಿಗಳನ್ನು ಪರಿಹರಿಸಿ ಕ್ಷೇತ್ರವು ಅಭಿವೃದ್ಧಿಯಾಗಿದೆ.

ಕಾರ್ಕಳ ತಾಲೂಕಿನ ಮೂಡುಬಿದ್ರೆ ಸಮೀಪದ ಪುತ್ತಿಗೆ ಶ್ರೀಸೋಮನಾಥೇಶ್ವರಕ್ಷೇತ್ರದಲ್ಲಿ ವಿದ್ವಾಂಸರ ಕೂಡುವಿಕೆಯಿಂದ ನಡೆದ ಪ್ರಶ್ನೆಯಲ್ಲಿ ಈ ಕ್ಷೇತ್ರವು ಸಹಸ್ರವರ್ಷಗಳಷ್ಟು ಪುರಾತನವಾದದ್ದು. ಈ ಕ್ಷೇತ್ರದ ಅರಸರಿಗೂ ವಿಜಯನಗರದ ಅರಸರಿಗೂ ಪರಸ್ಪರ ಸಂಬಂಧ ಬೆಳೆದು ಅವರ ಬಳುವಳಿಯಾಗಿ ಕೆಲವು ದೇವತೆಗಳು ಇಲ್ಲಿಗೆ ಬಂದು ನೆಲೆಸಿದ್ದಾರೆ ಎಂದು ತಿಳಿಸಿರುವರು. ಯಾವುದೇ ಲೋಹವನ್ನು ಇಲ್ಲಿಯ ಬಾವಿಗೆ ಹಾಕಿದರೆ ಸ್ವರ್ಣವಾಗುವ ವಿಶೇಷ ರಸಬಾವಿಯ ಯೋಗವಿದೆ ಎಂದು ಹೇಳಿದ್ದಾರೆ. ಈ ಕ್ಷೇತ್ರವು ಹಂತಹಂತವಾಗಿ ಅಭಿವೃದ್ಧಿಯಾಗಿದೆ.

ಪ್ರತಿಯೊಂದು ನಿಮಿತ್ತ, ಗ್ರಹಸ್ಥಿತಿಗಳಿಗೆ ತನ್ನ ವಿಶೇಷ ವಿಮರ್ಶೆ, ಯಾರಲ್ಲಿಯೂ ಇಲ್ಲದ ವಿಶೇಷ ಪ್ರಮಾಣಶ್ಲೋಕಗಳು, ಸೂಕ್ಷ್ಮಚಿಂತನಾಕ್ರಮ ಇವು ಬೈಲೂರು ತಂತ್ರಿಗಳ ವೈಶಿಷ್ಟ್ಯಗಳಾಗಿವೆ. ತನ್ನಲ್ಲಿ ಇಲ್ಲದ ಯಾವುದೇ ಪ್ರಮಾಣವನ್ನು ಬೇರೆ ವಿದ್ವಾಂಸರು ಹೇಳಿದಲ್ಲಿ ತನ್ನ ಲೇಖನಗ್ರಂಥದಲ್ಲಿ ಸಂಗ್ರಹಿಸಿಡುವ ಪರಿಪಾಟಿ ಇವರ ಮೇರುವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಇವರು ಸುಮಾರು ಇನ್ನೂರಕ್ಕೂ ಹೆಚ್ಚು ದೇವಳಗಳಲ್ಲಿ ದೇವಪ್ರಶ್ನೆಯ ದೈವಜ್ಞಕೃತ್ಯವನ್ನು ನಿರ್ವಹಿಸಿದ್ದಾರೆ. ಕೆಲವು ಪ್ರಸಿದ್ಧ ಕ್ಷೇತ್ರಗಳು ಹೀಗಿವೆ:

ಕಟೀಲು ದುರ್ಗಾಪರಮೇಶ್ವರೀದೇವಸ್ಥಾನ, ಬಪ್ಪನಾಡು ದುರ್ಗಾಪರಮೇಶ್ವರೀದೇವಸ್ಥಾನ, ಪಡುಬಿದ್ರಿ ಬ್ರಹ್ಮಸ್ಥಾನ, ತೆಂಕಕಾರಂದೂರು ವಿಷ್ಣುಮೂರ್ತಿದೇವಸ್ಥಾನ, ಉರ್ವ ಪಂಚಲಿಂಗೇಶ್ವರದೇವಸ್ಥಾನ, ಸಗ್ರಿ ವಾಸುಕಿ ಸುಬ್ರಹ್ಮಣ್ಯದೇವಸ್ಥಾನ, ಬಡಗುಪೇಟೆ ವಾಸುಕಿಅನಂತಪದ್ಮನಾಭಸ್ವಾಮಿಕ್ಷೇತ್ರ, ಪುತ್ತಿಗೆ ಸೋಮನಾಥೇಶ್ವರ ದೇವಸ್ಥಾನ, ಗಣೇಶಪುರ ಮಹಾಗಣಪತಿದೇವಸ್ಥಾನ, ಬಳ್ಳಮಂಜ ಶ್ರೀಮದನಂತೇಶ್ವರದೇವಸ್ಥಾನ. ಇಷ್ಟುಮಾತ್ರವಲ್ಲದೆ, ಪೆರ್ಡೂರು, ಜಾರ್ಕಳ, ಹಿರಿಯಡ್ಕ, ನಂದಿಕೂರು, ಸಾಂತೂರು ದೇವಳಗಳಲ್ಲೂ ಅಷ್ಟಮಂಗಲಪ್ರಶ್ನೆ ನಡೆಸಿದ್ದಾರೆ.

'ಸತ್ಯಾಂ ಕುರ್ವಂತು ಭಾರತೀಮ್' ಎಂದು ದೇವರನ್ನು ಪ್ರಾರ್ಥಿಸಿ ಪ್ರಶ್ನಕರ್ಮ ನಡೆಸಿದ ಶ್ರೀಯುತ ಬೈಲೂರು ಅನಂತಪದ್ಮನಾಭ ತಂತ್ರಿಗಳ ಮಾತು ಎಲ್ಲಿಯೂ ಎಂದಿಗೂ ಸುಳ್ಳಾಗಲಿಲ್ಲ.

ದಶಭೇದಂ ಗ್ರಹಗಣಿತಂ ಜಾತಕಮವಲೋಕ್ಯ ನಿರವಶೇಷಮಪಿ ಯಃ ।
ಕಥಯತಿ ಶುಭಮಶುಭಂ ವಾ ತಸ್ಯ ನ ಮಿಥ್ಯಾ ಭವೇದ್ವಾಣೀ ॥

ಎಂಬ ಅಭಿಜ್ಞರ ಮಾತಿನಂತೆ ದೈವಜ್ಞಲಕ್ಷಣಸಂಪನ್ನರಾದ ತಂತ್ರಿಗಳ ಮಾತು ಸುಳ್ಳಾಗಲು ಸಾಧ್ಯವೇ ಇಲ್ಲ.

ತಂತ್ರಿಗಳು ದೈವಜ್ಞರಾಗಿ ನುಡಿದಂತೆ ನಮ್ಮ ಕ್ಷೇತ್ರಗಳು ಪ್ರಗತಿ ಸಾಧಿಸಿವೆ ಎಂದು ಹಲವು ಕ್ಷೇತ್ರಗಳ ಮೊಕ್ತೇಸರರು ತಿಳಿಸಿದ್ದಾರೆ. ಇಂತಹ ಪೂರ್ಣವ್ಯಕ್ತಿ ಶ್ರೀಯುತ ಬೈಲೂರು ಅನಂತಪದ್ಮನಾಭ ತಂತ್ರಿಗಳು.

ಶಿಷ್ಯರಲ್ಲೂ ಶ್ರೋತೃಗಳಲ್ಲೂ ಪೂರ್ಣತೆಯನ್ನು ಕಾಣುವ ಅಹಂಭಾವರಹಿತರಾದ ಪೂರ್ಣದೈವಜ್ಞರಾದ ಮೂರ್ತಿವೆತ್ತ ಸತ್ವಗುಣದಂತೆ ಶೋಭಿಸುವ ಗುರುಗಳೇ! ನಿಮಗಿದೋ ನಮ್ಮ ನಮನ.

* * *

ದೈವಜ್ಞಂ ದೈವವತ್‌ಪಶ್ಯೇತ್ ನಾವಮನ್ಯೇತ ಕುತ್ರಚಿತ್ ।
ಹಂತಿ ಶ್ರೇಯಾಂಸಿ ಕಾರ್ಯಾಣಿ ದೈವಜ್ಞಸ್ಯಾವಮಾನನಮ್ ॥

ಜ್ಯೋತಿಷಿಕರನ್ನು ದೇವರಂತೆ ಕಾಣಬೇಕು. ಅವರಿಗೆ ಎಲ್ಲಯೂ ಅವಮಾನ ಮಾಡಬಾರದು. ಅವರಿಗೆ ಅವಮಾನ ಮಾಡಿದಲ್ಲಿ ಶುಭಕಾರ್ಯಗಳು ಭ್ರಷ್ಟವಾಗುತ್ತವೆ.

# ಗುರುಗಳೊಂದಿಗೆ ಒಂದು ಸಂಜೆ.......

● ಸಂದರ್ಶಕ: ಡಿ. ಶಿವಪ್ರಸಾದ ತಂತ್ರೀ

**ಸಂದರ್ಶಕರು:** *ಗುರುಗಳಾದ ಶ್ರೀಯುತ ಅನಂತಪದ್ಮನಾಭ ತಂತ್ರಿಯವರಿಗೆ ಪ್ರಣಾಮಗಳು.*
*ತಾವು ೮೨ ವಸಂತಗಳ ಸಂತೃಪ್ತ ಜೀವನವನ್ನು ಕಂಡಿದ್ದೀರಿ. ಅಪಾರವಾದ ಶಿಷ್ಯ ಸಂಪತ್ತನ್ನು ಹೊಂದಿದ್ದೀರಿ. ಈ ಸಮಯದಲ್ಲಿ ಜ್ಯೋತಿಃಶಾಸ್ತ್ರದ ಬೆಳವಣಿಗೆ ನಿಮಗೆ ತೃಪ್ತಿ ತಂದಿದೆಯೇ?*

**ಗುರುಗಳು:** ನನ್ನ ಬಾಲ್ಯಕಾಲದಲ್ಲಿ ನಮ್ಮ ಈ ಪ್ರಾಂತದಲ್ಲಿ ಜ್ಯೋತಿಃಶಾಸ್ತ್ರಗ್ರಂಥಗಳ ಅಧ್ಯಯನ ವಿಶೇಷವಾಗಿ ನಡೆಯುತ್ತಿರಲಿಲ್ಲ. ಹಿರಿಯ ಜ್ಯೋತಿಷಿಗಳು ಫಲನಿರೂಪಣೆಯ ನಿಯಮಗಳನ್ನಷ್ಟೇ ತಿಳಿಸುತ್ತಿದ್ದರು. ಅನಂತರ ಗ್ರಂಥಗಳ ಅಧ್ಯಯನ. ಕೇರಳ ಪ್ರಾಂತದಲ್ಲಿ ವಿಶೇಷ ತರಬೇತಿ ಆರಂಭವಾಗಿ ಕನ್ನಡ ಭಾಷೆಯಲ್ಲಿ ಜ್ಯೋತಿಷಗ್ರಂಥಗಳ ರಚನೆಯು ನಡೆಯುತ್ತಾ ಬಂತು. ಒಟ್ಟಿನಲ್ಲಿ ೮೦ ವರ್ಷಗಳ ನನ್ನ ಅನುಭವದಲ್ಲಿ ಶಾಸ್ತ್ರಾಧ್ಯಯನ ಪ್ರವೃತ್ತಿ ಹೆಚ್ಚಿತೆಂದೇ ಹೇಳಬಹುದು.

**ಸಂ:** *ಜ್ಯೋತಿಃಶಾಸ್ತ್ರ ಅಧ್ಯಯನಕ್ಕೆ ಪೂರಕವಲ್ಲದ ಪ್ರಸಂಗದಲ್ಲೂ ತಾವು ಹೇಗೆ ಆಳವಾಗಿ ಶಾಸ್ತ್ರಾಧ್ಯಯನ ನಡೆಸಿದಿರಿ?*

**ಗು:** ನನ್ನ ಆರಂಭಿಕ ಗುರುಗಳು ಶ್ರೀಯುತ ಭೀಮಾಚಾರ್ಯರು. ಅವರು ನನಗೆ ಮೊದಲಾಗಿ ಶಾಸ್ತ್ರದ ಪರಿಚಯವನ್ನು ಮಾಡಿಸಿಕೊಟ್ಟರು. ಅನಂತರ ಆಗಿನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಶಿವಳ್ಳಿಬ್ರಾಹ್ಮಣರ ಪರಸ್ಪರ ಸಹಕಾರ ಸಂಘದ ವಿಜ್ಞಾನಧಾಮ ಎಂಬ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವಾಗ ಚಂದ್ರೇಶ್ವರ ಮತ್ತು ಕಾಣಿಯೂರು ಮಠಗಳಲ್ಲಿ ಜಿಜ್ಞಾಸುಗಳಿಗೆ ಜ್ಯೋತಿಃಶಾಸ್ತ್ರದ ಪಾಠಪ್ರವಚನ ಮತ್ತು ಫಲನಿರೂಪಣೆಯನ್ನು ನಡೆಸುತ್ತಾ ಬಂದೆ. ಅಲ್ಲಿ ಬೃಹಜ್ಜಾತಕ ಪ್ರಶ್ನಮಾರ್ಗ ಮೊದಲಾದ ಗ್ರಂಥಗಳಿಗೆ ಟಿಪ್ಪಣಿಯನ್ನು ರಚಿಸಿಕೊಂಡು ಅಧ್ಯಯನ ಅಧ್ಯಾಪನ ಮುಂದುವರಿಸಿದೆ. ಅಲ್ಲಿ ಒಂದು ವರ್ಷ; ಕೇರಳನಿವಾಸಿಯಾಗಿದ್ದ ಗುರುಗಳಾದ ಭೀಮಾಚಾರ್ಯರ ಮಾರ್ಗದರ್ಶನವೂ ಸುದೈವವಶಾತ್ ಆಯಿತು. ಸಂಸ್ಕೃತ ಮಹಾವಿದ್ಯಾಲಯದಲ್ಲಿ ಜ್ಯೋತಿಷ ಪ್ರಾಧ್ಯಾಪಕರಾಗಿದ್ದ ಶ್ರೀಯುತ ನರಸಿಂಹ ಉಪಾಧ್ಯಾಯರು ಗಣಿತ ವಿಭಾಗಕ್ಕೆ ಸಂಬಂಧಪಟ್ಟ ಹಲವಾರು ವಿಚಾರ ಗಳನ್ನು ತಿಳಿಸಿದರು. ಹೀಗೆ ಸ್ವಂತ ಅಧ್ಯಯನ ಮತ್ತು ಜಿಜ್ಞಾಸುಗಳಿಗೆ ಅಧ್ಯಾಪನ ಮಾಡುತ್ತಲೇ ಶಾಸ್ತ್ರಜ್ಞಾನ ಬೆಳೆಯಿತು.

**ಸಂ:** *ನೀವು ನೂರಾರು ದೇವಾಲಯಗಳಲ್ಲಿ ಅಷ್ಟಮಂಗಲಪ್ರಶ್ನೆಯನ್ನು ನಡೆಸಿದ್ದೀರಿ. ಈ ಪ್ರಾಂತ ದಲ್ಲಿ ಪ್ರಶ್ನಭಾಗಕ್ಕೆ ಹೆಚ್ಚಿನ ಗೌರವವನ್ನು ತಂದುಕೊಟ್ಟಿದ್ದೀರಿ. ಇದರಲ್ಲಿ ಪ್ರವೃತ್ತಿ ಹೇಗೆ ಉಂಟಾಯಿತು?*

**ಗು:** ಗುರುಗಳೂ ಹಿರಿಯ ಆಗಮಿಕರೂ ಆಗಿದ್ದ ಕುಕ್ಕಿಕಟ್ಟೆ ರಾಮಕೃಷ್ಣ ಯಾನೆ ಕಾಳು ತಂತ್ರಿಗಳು ಆಗಿನ ಕಾಲದಲ್ಲಿ ಕೇರಳದಿಂದ ಜ್ಯೋತಿಷಿಗಳನ್ನು ತರಿಸಿ ದೇವಾಲಯ, ದೈವಸ್ಥಾನಗಳಲ್ಲಿ ಆರೂಢಪ್ರಶ್ನೆ, ಸ್ವರ್ಣಪ್ರಶ್ನೆ, ಅಷ್ಟಮಂಗಲಪ್ರಶ್ನೆಗಳನ್ನು ನಡೆಸುತ್ತಿದ್ದರು. ಅವರ ಜೊತೆಗೆ ಹೋಗಿ ಪ್ರಶ್ನ ವಿಭಾಗದ ವಿಷಯಗಳನ್ನೆಲ್ಲಾ ತಿಳಿದುಕೊಂಡೆ. ಅನಂತರ ಅವರ ಮಾರ್ಗದರ್ಶನದಲ್ಲಿ ಸ್ವತಂತ್ರವಾಗಿ ಪ್ರಶ್ನ ಕ್ರಿಯೆಗಳನ್ನು ನಡೆಸಿದೆ. ಮೊದಮೊದಲು ಸ್ಥಳದಲ್ಲಿ ಪ್ರಶ್ನೆಯನ್ನು ಇಟ್ಟು ಫಲವನ್ನು ಅನಂತರದಲ್ಲಿ ಬರೆದುಕೊಡುವ ಸಂಪ್ರದಾಯ ಇತ್ತು. ಅನಂತರ ಸ್ಥಳದಲ್ಲಿಯೇ ಫಲನಿರೂಪಣೆಯನ್ನು ಪ್ರಾರಂಭಿಸ ಲಾಯಿತು. ಈ ರೀತಿ ಕಾಳುತಂತ್ರಿಗಳ ಮಾರ್ಗದಶನದಲ್ಲೇ ಓರ್ವ ಅಷ್ಟಮಂಗಲ ಪ್ರಶ್ನೆ ಹೇಳುವ ಜ್ಯೋತಿಷಿಯಾಗಿ ರೂಪುಗೊಂಡೆ.

ಸಂ: 'ಅರ್ಥಕರೀ ವಿದ್ಯಾ' ಎಂದು ಹೆಚ್ಚಿನ ಜ್ಯೋತಿಷಿಗಳು ಧನಾರ್ಜನೆಯಲ್ಲಿ ಆಸಕ್ತರಾಗಿರುತ್ತಾರೆ. ಆದರೆ ನೀವು ಮಾತ್ರ ಅದಕ್ಕೆ ಅಪವಾದವಾಗಿ ಶಾಸ್ತ್ರಾಧ್ಯಾಪನಕ್ಕೇ ಮಹತ್ವ ಕೊಟ್ಟು ಅಸಂಖ್ಯ ಜ್ಯೋತಿಷಿಗಳನ್ನು ಸಮಾಜಕ್ಕೆ ನೀಡಿದ್ದೀರಿ. ಈ ಇಳಿವಯಸ್ಸಿನಲ್ಲೂ ಪಾಠ ಹೇಳುವುದೆಂದರೆ ನಿಮಗೆ ಪಂಚಪ್ರಾಣ. ಈ ಪ್ರವೃತ್ತಿಗೆ ಪ್ರೇರಣೆ ಯಾರಾದರೂ ಇರುವರೇ?

ಗು: *ಪ್ರೇರಣೆ ಎಂದು ಯಾರನ್ನೂ ಹೇಳುವಂತಿಲ್ಲ. ಆರಂಭದಿಂದಲೂ ಜಿಜ್ಞಾಸುಗಳಾಗಿ ಬಂದವರಿಗೆ ಪಾಠ ಮಾಡುತ್ತಲೇ ಶಾಸ್ತ್ರಾಧ್ಯಯನವನ್ನು ನಡೆಸಿದೆನು. ಪಾಠ ಮಾಡಿದಾಗ ಸಿಗುವ ಸಂತೋಷ, ಆತ್ಮತೃಪ್ತಿ ಬೇರಾವುದರಿಂದಲೂ ಸಿಗದು. ಟಿಪ್ಪಣಿ ತಯಾರಿಸುವುದು, ಪಾಠ ಮಾಡುವುದು ನನ್ನ ದಿನಚರಿಯ ಮುಖ್ಯ ಅಂಶವಾಗಿದೆ.*

ಸಂ: ಗಣಿತಭೇದದ ಪಂಚಾಂಗಗಳಿಂದ ಏಕಾದಶ್ಯಾದಿ ಹಬ್ಬಹರಿದಿನಗಳ ಆಚರಣೆಯಲ್ಲಿ ದ್ವಂದ್ವ ತಲೆದೋರಿದ್ದು ಇದೊಂದು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ. ಈ ಬಗ್ಗೆ ನೀವು ಸೂಚಿಸುವ ಪರಿಹಾರ ಏನು?

ಗು: ಯಾವ ಗಣಿತದಿಂದ ಸೂರ್ಯಚಂದ್ರರ ಗ್ರಹಣವು ಸ್ಪಷ್ಟವಾಗಿ ತೋರುವುದೋ ಆ ಗಣಿತದಿಂದ ಸಾಧಿಸಿದ ಪಂಚಾಂಗದಿಂದಲೇ ಧರ್ಮಾಚರಣೆಯನ್ನು ಮಾಡಬೇಕೆಂದು ನನ್ನ ನಿಲುವು. ಈ ಬಗ್ಗೆ ಮಠಾಧಿಪತಿಗಳು ಎಲ್ಲರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ಒಂದು ತೀರ್ಮಾನವನ್ನು ಕೈಗೊಳ್ಳ ಬೇಕಾಗಿದ್ದು ಪ್ರಸ್ತುತ ಪ್ರಸಂಗದಲ್ಲಿ ಅತೀ ಅಗತ್ಯವಾಗಿದೆ.

ಸಂ: *ಜ್ಯೋತಿಃಶಾಸ್ತ್ರ ಅಧ್ಯಯನ ಮಾಡುವ ಯುವ ಜನಾಂಗಕ್ಕೆ ನಿಮ್ಮ ಸಂದೇಶವೇನು?*

ಗು: **ಅನೇಕಹೋರಾತತ್ತ್ವಜ್ಞಃ ಪಂಚಸಿದ್ಧಾಂತಕೋವಿದಃ ।**
**ಊಹಾಪೋಹಪಟುಃ ಸಿದ್ಧಮಂತ್ರೋ ಜಾನಾತಿ ಜಾತಕಮ್ ॥**

ಎಂದು ಹೇಳಿಲ್ಲವೇ? ಅನೇಕ ಹೋರೆಗಳ ಆಮೂಲಾಗ್ರ ಅಧ್ಯಯನ ನಡೆಸಬೇಕು. ಗ್ರಹಗಣಿತದಲ್ಲಿ ನೈಪುಣ್ಯ ವನ್ನು ಹೊಂದಬೇಕು. ಕಂಪ್ಯೂಟರ್‌ನಲ್ಲಿ ಸೂಕ್ಷ್ಮಗಣಿತಜ್ಞಾನವಾಗುವುದರಿಂದ ಅದನ್ನೂ ಬಳಸಿಕೊಳ್ಳಬಹುದು. ಮಂತ್ರಸಿದ್ಧಿ, ಪ್ರಾಯೋಗಿಕ ಅನುಭವಗಳಿಂದ ಊಹಾಪೋಹಪಟುತ್ವವನ್ನು ಬೆಳೆಸಿಕೊಂಡಾಗ ಓರ್ವ ಉತ್ತಮ ಜ್ಯೋತಿಷಿಯಾಗಲು ಸಾಧ್ಯ.

ಸಂ: ಸಹಸ್ರಚಂದ್ರದರ್ಶನಶಾಂತಿಯ ಈ ಸದವಸರದಲ್ಲಿ ಪೂಜ್ಯ ಶ್ರೀಪಾದರುಗಳಿಂದ ಅಭಿನಂದಿಸಲ್ಪಡುತ್ತಿರುವ ತಮಗೆ ಶಿಷ್ಯಕೋಟಿಯ ಅನಂತ ನಮನಗಳು.

* * *

# प्रश्नानुक्रमः

प्रश्नशास्त्रसुधासिन्धोः सारमेष निबन्धराट्
सञ्जग्राह निजे हस्ते कुम्भोद्भव इवार्णवम् ।।

दिङ्मूढानां तमसि गहने भद्रदीपायमानः
सम्मग्नानां महति जलधौ मित्रपोतायमानः ।
सङ्ग्रामार्थं ह्यभिजिगमिषोः विप्ररक्षेव राज्ञः
दैवज्ञानां वरसुहृदयं राजतां सत्सभासु ।।

प्रश्नाख्यशास्त्रजलधेः खलु पारमेत्य
सम्पाद्यमौक्तिकचयं महताश्रमेण ।
निर्माय नूतनतमं स्रजमर्पयामो
कान्तेव नाथ नृहरे तव कण्ठदेशे ।।

# विषयानुक्रमः

## प्रथमोऽध्यायः 1 - 3



---

## द्वितीयोऽध्यायः 4 - 27

## तृतीयोऽध्यायः 28 - 30



## चतुर्थोऽध्यायः 31 - 38



## पञ्चमोऽध्यायः 39 - 40

## षष्ठोऽध्यायः 41 - 50



---

## सप्तमोऽध्यायः 51 - 54



---

## अष्टमोऽध्यायः 55 - 65

## नवमोऽध्यायः 65 - 67



## दशमोऽध्यायः 68 - 76



## एकादशोऽध्यायः 76 - 90

## द्वादशोऽध्यायः 91 - 111



## त्रयोदशोऽध्यायः 112 - 117

## चतुर्दशोऽध्यायः 117 - 141

---

## पञ्चदशोऽध्यायः 141 - 145



* * *

|| श्रीगुरुगणेशाभ्यां नमः ||
|| श्रीसरस्वत्यै नमः ||

# || प्रश्नानुक्रमः ||

## || अथ प्रथमोऽध्यायः ||

### मङ्गलाचरणम्

रूप्यासन्दिपुरस्थमष्टयतिभिः संसेव्यमानं हरिं
नत्वा प्राणसहायमिष्टफलदं सूर्यादिखेटान् गुरून् ।
नैकानप्यवलोक्य पूर्वरचितान् शुद्धान् प्रबन्धान् धिया
प्रश्नानुक्रम एष पण्डितजनानन्दाय संग्रथ्यते || १ ||

### गुरुवन्दनम्

आपादमौलिपर्यन्तं गुरूणामाकृतिं स्मरेत् ।
तेन विघ्नाः प्रणश्यन्ति सिद्ध्यन्ति च मनोरथाः || २ ||

स जयति गुरुर्गरीयान् येनाधीतं वितीर्णमप्यखिलम् ।
यत्सान्निध्यात् प्रकृत्या स लघीयानपि गुरुर्भवत्यत्र || ३ ||

यःशास्त्रमखिलं ज्ञात्वा स्वशिष्यानध्यजीगपत् ।
स्वाध्यायाध्यापनासक्तः पद्मनाभो जयत्यसौ || ४ ||

जग्राह शास्त्रमखिलं हस्ते श्रमेण महता योऽधीत्य ।
अनुजग्राह च शिष्यान् तं वन्देमहि सुपद्मनाभार्यम् || ५ ||

तदुक्तमेव संगृह्य दीयते ग्रन्थरूपतः ।
शिष्यहृत्पद्मगेहाय पद्मनाभाय धीमते || ६ ||

नमः सूर्याय सोमाय मङ्गलाय बुधाय च ।
गुरुशुक्रशनिभ्यश्च राहवे केतवे नमः ॥ ७ ॥

गुरुभ्यश्च ग्रहेभ्यश्च मया बद्धोऽयमञ्जलिः ।
प्रसन्नमनसस्ते मे सत्यां कुर्वन्तु भारतीम् ॥ ८ ॥

**ज्योतिःशास्त्रस्वरूपम्**

वेदास्तावद्यज्ञकर्मप्रवृत्ता यज्ञाः प्रोक्तास्ते तु कालाश्रयेण ।
शास्त्रादस्मात् कालबोधो यतः स्याद्वेदाङ्गत्वं ज्यौतिषस्योक्तमस्मात् ॥ ९ ॥

यदुपचितमन्यजन्मनि शुभाशुभं तस्य कर्मणः पक्तिम् ।
व्यञ्जयति शास्त्रमेतत्तमसि द्रव्याणि दीप इव ॥ १० ॥

स्कन्धत्रयात्मकं ज्योतिश्शास्त्रमेतत् षडङ्गवत् ।
गणितं संहिता होरा चेति स्कन्धत्रयं मतम् ॥ ११ ॥

जातकगोलनिमित्तप्रश्नमुहूर्ताख्यगणितनामानि ।
अभिदधतीह षडङ्गान्याचार्या ज्यौतिषे महाशास्त्रे ॥ १२ ॥

गोलो गणितं चेति द्वितयं खलु गणितसंज्ञिते स्कन्धे ।
होरासंहितयोरपि निमित्तमन्यत्त्रयं च होराख्ये ॥ १३ ॥

प्रमाणफलभेदेन द्विविधं च भवेदिदम् ।
प्रमाणं गणितस्कन्धः स्कन्धावन्यौ फलात्मकौ ॥ १४ ॥

अध्येतव्यं ब्राह्मणैरेव तस्माज्ज्योतिश्शास्त्रं पुण्यमेतद्रहस्यम् ।
एतद्बुद्ध्वा सम्यगाप्नोति यस्मादर्थं धर्मं मोक्षमग्र्यं यशश्च ॥ १५ ॥

म्लेच्छा हि यवनास्तेषु सम्यक्शास्त्रमिदं स्थितम् ।
ऋषिवत्तेऽपि पूज्यन्ते किं पुनर्दैवविद् द्विजः ॥ १६ ॥

**दैवज्ञलक्षणम्**

ज्योतिश्शास्त्रविदग्धो गणितपटुर्वृत्तवांश्च सत्यवचाः ।
विनयी वेदाध्यायी ग्रहयजनपटुश्च भवतु दैवज्ञः ॥ १७ ॥

अनेकहोरातत्त्वज्ञः पञ्चसिद्धान्तकोविदः ।
ऊहापोहपटुः सिद्धमन्त्रो जानाति जातकम् ॥ १८ ॥

होरां वराहमिहिरास्यविनिर्गतां ये मालामिवादधति दैवविदः स्वकण्ठे ।
कृष्णीयशास्त्रमपि भर्तृमतीव सूत्रं तेषां सभासु महती भवतीह शोभा ॥ १९ ॥

**जातकप्रश्नयोर्विषयविभागः**

स्वर्गाद्यनुभवक्षीणशिष्टप्राचीनकर्मणाम् ।
भोगाय जननं नृणां मोहभाजां मुहुर्मुहुः ॥ २० ॥

अत्र तु द्विविधं कर्म प्राक्कर्म निजयत्नतः ।
अन्त्यस्यानुभवोऽमुत्र भुक्त्वेहाद्यस्य संक्षयः ॥ २१ ॥

प्राग्जन्मार्जितपुण्याघप्राबल्योद्रेकहेतुतः ।
प्रारब्धसंज्ञि मानुष्यजातौ जातकचिन्तनम् ॥ २२ ॥

आमरणादिह जन्तुः प्राक्कृतनिजकर्मपाकमनुभवति ।
तद्वक्तुमलं जातकमथ किं प्रश्नेन कथ्यते सत्यम् ॥ २३ ॥

कस्य पक्तिरिति ज्ञातुमिदानीं पूर्वकर्मणाम् ।
इहार्जितं च विज्ञातुं कर्म प्रश्नो विधीयते ॥ २४ ॥

यदा जातकतः प्रश्नो गुणदोषैर्विभिद्यते ।
तदा शुभाशुभं विद्यात् कर्मभेदैरिहार्जितैः ॥ २५ ॥

यदानुसरति प्रश्नो जातकं ग्रहभादिभिः ।
तदा प्राक्कर्मपाकः स्यादित्याद्यूह्यं हि धीमता ॥ २६ ॥

बुद्ध्वा शास्त्रं यथान्यायं बलाबलविधानतः ।
यथोक्तं जातके सर्वं तद्वत्प्रश्नेऽपि चिन्तयेत् ॥ २७ ॥

सम्प्रेर्यमाणस्त्ववशः शरीरी प्रसह्य दैवेन शुभाशुभेन ।
ज्योतिर्विदः सन्निधिमेति यस्मात् प्रश्नोऽप्यतो जन्मसमः फलेषु ॥ २८ ॥

जन्मलग्नतया प्रश्नलग्नं सङ्कल्प्य पण्डितः ।
जातके यद्यदुद्दिष्टं तत्तत्प्रश्नेऽपि चिन्तयेत् ॥ २९ ॥

**॥ इति प्रश्नानुक्रमे प्रथमोऽध्यायः ॥**

* * *

नमः सूर्याय सोमाय मङ्गलाय बुधाय च ।
गुरुशुक्रशनिभ्यश्च राहवे केतवे नमः ॥ ७ ॥

गुरुभ्यश्च ग्रहेभ्यश्च मया बद्धोऽयमञ्जलिः ।
प्रसन्नमनसस्ते मे सत्यां कुर्वन्तु भारतीम् ॥ ८ ॥

**ज्योतिःशास्त्रस्वरूपम्**

वेदास्तावद्यज्ञकर्मप्रवृत्ता यज्ञाः प्रोक्तास्ते तु कालाश्रयेण ।
शास्त्रादस्मात् कालबोधो यतः स्याद्वेदाङ्गत्वं ज्यौतिषस्योक्तमस्मात् ॥ ९ ॥

यदुपचितमन्यजन्मनि शुभाशुभं तस्य कर्मणः पक्तिम् ।
व्यञ्जयति शास्त्रमेतत्तमसि द्रव्याणि दीप इव ॥ १० ॥

स्कन्धत्रयात्मकं ज्योतिश्शास्त्रमेतत् षडङ्गवत् ।
गणितं संहिता होरा चेति स्कन्धत्रयं मतम् ॥ ११ ॥

जातकगोलनिमित्तप्रश्नमुहूर्ताख्यगणितनामानि ।
अभिदधतीह षडङ्गान्याचार्या ज्यौतिषे महाशास्त्रे ॥ १२ ॥

गोलो गणितं चेति द्वितयं खलु गणितसंज्ञिते स्कन्धे ।
होरासंहितयोरपि निमित्तमन्यत्त्रयं च होराख्ये ॥ १३ ॥

प्रमाणफलभेदेन द्विविधं च भवेदिदम् ।
प्रमाणं गणितस्कन्धः स्कन्धावन्यौ फलात्मकौ ॥ १४ ॥

अध्येतव्यं ब्राह्मणैरेव तस्माज्ज्योतिश्शास्त्रं पुण्यमेतद्रहस्यम् ।
एतद्बुद्ध्वा सम्यगाप्नोति यस्मादर्थं धर्मं मोक्षमग्र्यं यशश्च ॥ १५ ॥

म्लेच्छा हि यवनास्तेषु सम्यक्शास्त्रमिदं स्थितम् ।
ऋषिवत्तेऽपि पूज्यन्ते किं पुनर्दैवविद् द्विजः ॥ १६ ॥

**दैवज्ञलक्षणम्**

ज्योतिश्शास्त्रविदग्धो गणितपटुर्वृत्तवांश्च सत्यवचाः ।
विनयी वेदाध्यायी ग्रहयजनपटुश्च भवतु दैवज्ञः ॥ १७ ॥

अनेकहोरातत्त्वज्ञः पञ्चसिद्धान्तकोविदः ।
ऊहापोहपटुः सिद्धमन्त्रो जानाति जातकम् ॥ १८ ॥

होरां वराहमिहिरास्यविनिर्गतां ये मालामिवादधति दैवविदः स्वकण्ठे।
कृष्णीयशास्त्रमपि भर्तृमतीव सूत्रं तेषां सभासु महती भवतीह शोभा ॥ १९ ॥

**जातकप्रश्नयोर्विषयविभागः**

स्वर्गाद्यनुभवक्षीणशिष्टप्राचीनकर्मणाम्।
भोगाय जननं नृणां मोहभाजां मुहुर्मुहुः ॥ २० ॥

अत्र तु द्विविधं कर्म प्राक्कर्म निजयत्नतः।
अन्त्यस्यानुभवोऽमुत्र भुक्त्वेहाद्यस्य संक्षयः ॥ २१ ॥

प्राग्जन्मार्जितपुण्याघप्राबल्योद्रेकहेतुतः।
प्रारब्धसंज्ञि मानुष्यजातौ जातकचिन्तनम् ॥ २२ ॥

आमरणादिह जन्तुः प्राक्कृतनिजकर्मपाकमनुभवति।
तद्वक्तुमलं जातकमथ किं प्रश्नेन कथ्यते सत्यम् ॥ २३ ॥

कस्य पक्तिरिति ज्ञातुमिदानीं पूर्वकर्मणाम्।
इहार्जितं च विज्ञातुं कर्म प्रश्नो विधीयते ॥ २४ ॥

यदा जातकतः प्रश्नो गुणदोषैर्विभिद्यते।
तदा शुभाशुभं विद्यात् कर्मभेदैरिहार्जितैः ॥ २५ ॥

यदानुसरति प्रश्नो जातकं ग्रहभादिभिः।
तदा प्राक्कर्मपाकः स्यादित्याद्यूह्यं हि धीमता ॥ २६ ॥

बुद्ध्वा शास्त्रं यथान्यायं बलाबलविधानतः।
यथोक्तं जातके सर्वं तद्वत्प्रश्नेऽपि चिन्तयेत् ॥ २७ ॥

सम्प्रेर्यमाणस्त्ववशः शरीरी प्रसह्य दैवेन शुभाशुभेन।
ज्योतिर्विदः सन्निधिमेति यस्मात् प्रश्नोऽप्यतो जन्मसमः फलेषु ॥ २८ ॥

जन्मलग्नतया प्रश्नलग्नं सङ्कल्प्य पण्डितः।
जातके यद्यदुद्दिष्टं तत्तत्प्रश्नेऽपि चिन्तयेत् ॥ २९ ॥

**॥ इति प्रश्नानुक्रमे प्रथमोऽध्यायः ॥**

* * *

## ।। अथ द्वितीयोऽध्यायः ।।

*पृच्छासमये एव दैवज्ञेन ज्ञातव्या विषयाः*

**दैवज्ञेन समाहितेन समयो देशः स्ववायुर्दशा**
**प्रष्टुः स्पर्शनमाश्रितर्क्षहरितौ प्रश्नाक्षराणि स्थितिः ।**
**चेष्टाभावविलोकने च वसनाद्यन्यच्च तत्कालजं**
**पृच्छायाः समये तदेतदखिलं ज्ञेयं हि वक्तुं फलम्** ।। १ ।।

**दैवज्ञकृत्यानि**

ज्योतिश्शास्त्रार्थसम्पन्नस्त्रैकालिकविदांवरः ।
ग्रहपूजापरो नित्यं समाहितमनाः स्मृतः ।। २ ।।

उत्थायोषसि देवतां हृदि निजां ध्यात्वा वपुःशोधनं
कृत्वा स्नानपुरःसरं सलिलविक्षेपादि कर्माखिलम् ।
कृत्वा मन्त्रजपादिकं च विधिवत्पञ्चाङ्गवीक्षां तथा
खेटानां गणनं च दैवविदथ स्वस्थान्तरात्मा भवेत् ।। ३ ।।

**उषःकालादिनिरूपणम्**

पञ्चपञ्च उषःकालः सप्तपञ्चारुणोदयः ।
अष्टपञ्च भवेत्प्रातः शेषः सूर्योदयः स्मृतः ।। ४ ।।

सङ्कल्पः स्तोत्रपठनं मार्जनं चाघमर्षणम् ।
देवादितर्पणं चैव स्नानं पञ्चाङ्गलक्षणम् ।। ५ ।।

मन्त्रं यथाविधि गुरोः सुदिने गृहीत्वा तद्देवतां जपहुतिप्रमुखैः प्रतोष्य
ज्ञानाय जातकफलस्य तु सिद्धमन्त्रः स्यादेव दैवविदिहाप्तवचस्तथा हि ।। ६ ।।

भूरिश्रीविभवस्तिथिश्रवणतो वारान्महायुर्भवे-
न्नक्षत्रं कृतपापसञ्चयहरं योगस्तु रोगापहा ।
यच्चित्तेप्सितमाशु तच्च करणात् सम्प्राप्यते मानवैः
श्रोतव्यं बहुयज्ञपुण्यफलदं पञ्चाङ्गमेतच्छुभम् ।। ७ ।।

आलोके खलु यस्य कस्यचिदसावायाति यत्किञ्चन
प्रष्टुं मां प्रति नूनमित्यवहितस्तन्न्यस्तदृष्टिर्दृढम् ।
तच्चेष्टादिकमाकलय्य सकलं तत्कालजातं पुन-
र्जानीयात् सदसन्निमित्तमपि च श्वासस्थितिं चात्मनः ॥ ८ ॥

पृच्छककृत्यानि

तिथौ शुभायां शुभदेऽनुकूले तारे दिने भानुशुभग्रहाणाम् ।
प्रष्टेप्सितं प्राभृतदानतुष्टं ज्योतिर्विदं प्रातरुपेत्य पृच्छेत् ॥ ९ ॥

तस्मान्नृपः कुसुमरत्नफलाग्रहस्तः प्रातः प्रणम्य रवये हरिदिङ्मुखस्थः ।
होराङ्गतन्त्रकुशलान् हितकारिणश्च संगृह्य दैवगणकान् सकृदेव पृच्छेत् ॥ १० ॥

**शान्तो विवेकी शुद्धात्मा हिरण्यमणिसत्फलैः ।**
**दैवज्ञं प्रेमभावेन सम्पूज्यार्थं निवेदयेत् ॥ ११ ॥**

**दैवज्ञं दैववत् पश्येन्नावमन्येत कर्हिचित् ।**
**हन्ति श्रेयांसि कार्याणि दैवज्ञस्यावमाननम् ॥ १२ ॥**

दैवज्ञसावधानत्वं प्रष्टुश्च प्रश्नसौष्ठवम् ।
इष्टद्रव्यश्रुतीक्षे च सम्यगिष्टोपलब्धये ॥ १३ ॥

## समयः

बालान्नवर्ज्यतारासु गण्डान्तोष्णविषेषु च ।
अष्टमीविष्टिरिक्तासु स्थिरेषु करणेषु च ॥ १४ ॥

तिथिनक्षत्रराश्यंशसन्धौ च गुलिकोदये ।
चक्रार्धे ग्रहणे सार्पशिरस्येकार्गले तथा ॥ १५ ॥

मृत्युदग्धादियोगेषु पापदृष्ट्युदयेषु च ।
त्रयोदश्यां प्रदोषे च निशीथे रविदर्शने ॥ १६ ॥

सङ्क्रान्तौ च तथा प्रष्टुर्विपत्प्रत्यरयोर्वधे ।
अष्टमे च तथा राशौ जन्माष्टमगते विधौ ॥ १७ ॥

इत्यादिदुष्टकालेषु प्रश्नः स्यादशुभप्रदः ॥ १/२ ॥

